KA / BG-GPO / 2515 / WPP-47 / 2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೩ | ಬೆಂಗಳೂರು, ಗುರುವಾರ, ಏಪ್ರಿಲ್ ೧೦, ೨೦೦೮ (ಚೈತ್ರ ೨೧, ಶಕ ವರ್ಷ ೧೯೩೦) | ಸಂಚಿಕೆ ೧೫ |
| --- | --- | --- |

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಇಂಧನ ಸಚಿವಾಲಯ

**ವಿಷಯ:** ಮೆ:: ಸಾಯಿ ಪ್ರಸನ್ನ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಯ 1.5 ಮೆಗಾ ವ್ಯಾಟ್ ಸಾಮರ್ಥ್ಯದ ಅಪ್ಪರ್ ಚಾರ್ಮಡಿ ಕಿರು ಜಲ ವಿದ್ಯುತ್ ಯೋಜನೆಯನ್ನು 2.00 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಇಎನ್ 322 ಎನ್‌ಸಿಇ 2006 ದಿನಾಂಕ: 16.10.2006.

2) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ಅಪ್ಪರ್ ಚಾರ್ಮಡಿ/2007/2956 ದಿನಾಂಕ: 24.1.2008.

**ಪ್ರಸ್ತಾವನೆ :–**

ಮೇಲೆ ಓದಲಾದ ಕ್ರಮಾಂಕ (1)ರ ಆದೇಶದಲ್ಲಿ ಮೆ:: ಸಾಯಿ ಪ್ರಸನ್ನ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ ತಾಲ್ಲೂಕಿನ ಚಾರ್ಮಡಿ ಗ್ರಾಮದ ಬಳಿ ಚಾರ್ಮಡಿ ನದಿಗೆ ಅಡ್ಡಲಾಗಿ 1.5 ಮೆಗಾ ವ್ಯಾಟ್ ಸಾಮರ್ಥ್ಯದ ಅಪ್ಪರ್ ಚಾರ್ಮಡಿ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

ಮೇಲೆ ಓದಲಾದ ಕ್ರಮಾಂಕ (2)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಮೇಲಿನ ಕಂಪನಿಯ ಯೋಜನಾ ಸ್ಥಳದಲ್ಲಿ ಇನ್ನೂ ಹೆಚ್ಚಿನ ವಿದ್ಯುತ್ ಉತ್ಪಾದನಾ ಸಾಮರ್ಥ್ಯವಿರುವುದರಿಂದ ಅಪ್ಪರ್ ಚಾರ್ಮಡಿ ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 1.5 ಮೆಗಾ ವ್ಯಾಟ್‌ನಿಂದ 2.00 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಲು ಕೋರಿಕೆ ಸಲ್ಲಿಸಿರುವುದನ್ನು ಪರಿಶೀಲಿಸಿ, ಪರಿಗಣಿಸಬಹುದೆಂದು ಸರ್ಕಾರಕ್ಕೆ ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಮೇಲಿನ ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 43 ಎನ್‌ಸಿಇ 2008, ಬೆಂಗಳೂರು, ದಿನಾಂಕ: 13ನೇ ಫೆಬ್ರವರಿ 2008**

ಸರ್ಕಾರವು ಮೆ:: ಸಾಯಿ ಪ್ರಸನ್ನ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ ತಾಲ್ಲೂಕಿನ ಚಾರ್ಮಡಿ ಗ್ರಾಮದ ಬಳಿ ಚಾರ್ಮಡಿ ನದಿಗೆ ಅಡ್ಡಲಾಗಿ ಹಂಚಿಕೆ ಮಾಡಿರುವ 1.5 ಮೆಗಾ ವ್ಯಾಟ್ ಸಾಮರ್ಥ್ಯದ ಅಪ್ಪರ್ ಚಾರ್ಮಡಿ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 2.00 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಿ ಅನುಷ್ಠಾನ ಮಾಡಲು ಅನುಮತಿ ನೀಡಲಾಗಿದೆ.

ಮೇಲೆ ಓದಲಾದ ಕ್ರಮಾಂಕ (1)ರ ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರೆಯುತ್ತವೆ.

ಭಾರತದ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರೇಶ್.ಬಿ.ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

ಪಿ.ಆರ್. 294

**ವಿಷಯ:** ಮೆ:: ಭಾವನ ಹೈಡ್ರೊ ಎಲೆಕ್ಟ್ರಿಕ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಯ 1.25 ಮೆಗಾ ವ್ಯಾಟ್ ಸಾಮರ್ಥ್ಯದ ಗಂಗನಹಾಳ್ ಕಿರು ಜಲ ವಿದ್ಯುತ್ ಯೋಜನೆಯನ್ನು 2.00 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಇಂಇ 298 ಎನ್‌ಸಿಇ 2004 ದಿನಾಂಕ: 13.9.2004.
2) ಸರ್ಕಾರಿ ಆದೇಶ ಸಂಖ್ಯೆ: ಇಂಇ 298 ಎನ್‌ಸಿಇ 2004 ದಿನಾಂಕ: 20.12.2004.
3) ಸರ್ಕಾರಿ ಆದೇಶ ಸಂಖ್ಯೆ: ಇಎನ್ 430 ಎನ್‌ಸಿಇ 2007 ದಿನಾಂಕ: 10.12.2007.
4) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ಗಂಗನಹಾಳ್/2007/2955 ದಿನಾಂಕ: 24.1.2008.

**ಪ್ರಸ್ತಾವನೆ :–**

ಮೇಲೆ ಓದಲಾದ ಕ್ರಮಾಂಕ (1)ರ ಆದೇಶದಲ್ಲಿ ಮೆ:: ಭಾವನ ಹೈಡ್ರೋ ಎಲೆಕ್ಟ್ರಿಕ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಗುಲ್ಬರ್ಗಾ ಜಿಲ್ಲೆಯ ಶಹಾಪೂರ ತಾಲ್ಲೂಕಿನ ಗಂಗನಹಾಳ ಗ್ರಾಮ ಶಹಾಪುರ ಬ್ರ್ಯಾಂಚ್ ಕೆನಾಲ್‌ನ ಡಿಸ್ಟ್ರಿಬ್ಯುಟರಿ–7 ಕ್ಕೆ ಅಡ್ಡಲಾಗಿ 800 ಕಿಲೊ ವ್ಯಾಟ್ ಸಾಮರ್ಥ್ಯದ ಗಂಗನಹಾಳ್ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

ಮೇಲೆ ಓದಲಾದ ಕ್ರಮಾಂಕ (2)ರ ಆದೇಶದಲ್ಲಿ ಮೆ:: ಭಾವನ ಹೈಡ್ರೊ ಎಲೆಕ್ಟ್ರಿಕ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಹಂಚಿಕೆ ಮಾಡಲಾಗಿರುವ 800 ಕಿಲೊ ವ್ಯಾಟ್ ಸಾಮರ್ಥ್ಯದ ಗಂಗನಹಾಳ್ ಕಿರು ಜಲ ವಿದ್ಯುತ್ ಯೋಜನೆಯನ್ನು 1.25 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಿ ಅನುಷ್ಠಾನ ಮಾಡಲು ಅನುಮತಿ ನೀಡಲಾಗಿದೆ.

ಮೇಲೆ ಓದಲಾದ ಕ್ರಮಾಂಕ (3)ರ ಆದೇಶದಲ್ಲಿ ಮೆ:: ಭಾವನ ಹೈಡ್ರೋ ಎಲೆಕ್ಟ್ರಿಕ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಹಂಚಿಕೆ ಮಾಡಲಾಗಿರುವ 1.25 ಮೆಗಾ ವ್ಯಾಟ್ ಸಾಮರ್ಥ್ಯದ ಗಂಗನಹಾಳ್ ಕಿರು ಜಲ ವಿದ್ಯುತ್ ಯೋಜನೆಯನ್ನು ಅನುಷ್ಠಾನ ಮಾಡಲು ಕಾಲಾವಕಾಶವನ್ನು ದಿನಾಂಕ: 10.12.2007 ರಿಂದ ಮುಂದಿನ ಮೂರು ವರ್ಷಗಳ ಅವಧಿಗೆ ವಿಸ್ತರಿಸಲಾಗಿದೆ.

ಮೇಲೆ ಓದಲಾದ ಕ್ರಮಾಂಕ (4)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಮೇಲೆ ತಿಳಿಸಿರುವ ಕಂಪನಿಯ ಗಂಗನಹಾಳ್ ಕಿರು ಜಲ ವಿದ್ಯುತ್ ಯೋಜನಾ ಸ್ಥಳದಲ್ಲಿ ಇನ್ನೂ ಹೆಚ್ಚಿನ ವಿದ್ಯುತ್ ಉತ್ಪಾದನಾ ಸಾಮರ್ಥ್ಯ ಇರುವುದೆಂದು ತಿಳಿಸುತ್ತಾ ಗಂಗನಹಾಳ್ ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 1.25 ಮೆಗಾ ವ್ಯಾಟ್‌ನಿಂದ 2.00 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಲು ಕೋರಿಕೊಂಡಿರುವುದರಿಂದ ಅವರ ಕೋರಿಕೆ ಪರಿಗಣಿಸಲು ಸರ್ಕಾರಕ್ಕೆ ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಮೇಲಿನ ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 52 ಎನ್‌ಸಿಇ 2008, ಬೆಂಗಳೂರು, ದಿನಾಂಕ: 13ನೇ ಫೆಬ್ರವರಿ 2008**

ಸರ್ಕಾರವು ಮೆ:: ಭಾವನ ಹೈಡ್ರೊ ಎಲೆಕ್ಟ್ರಿಕ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಗುಲ್ಬರ್ಗಾ ಜಿಲ್ಲೆಯ ಶಹಾಪುರ ತಾಲ್ಲೂಕಿನ ಗಂಗನಹಾಳ ಗ್ರಾಮ ಶಹಾಪುರ ಬ್ರ್ಯಾಂಚ್ ಕೆನಾಲ್‌ನ ಡಿಸ್ಟ್ರಿಬ್ಯುಟರಿ–7 ಕ್ಕೆ ಅಡ್ಡಲಾಗಿ ಹಂಚಿಕೆ ಮಾಡಿರುವ 1.25 ಮೆಗಾ ವ್ಯಾಟ್ ಸಾಮರ್ಥ್ಯದ ಗಂಗನಹಾಳ್ ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 2.00 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಿ ಅನುಷ್ಠಾನ ಮಾಡಲು ಅನುಮತಿ ನೀಡಲಾಗಿದೆ.

ಮೇಲೆ ಓದಲಾದ ಕ್ರಮಾಂಕ (1)ರ ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರೆಯುತ್ತವೆ.

ಭಾರತದ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರೇಶ್.ಬಿ.ಕೃಷ್ಣಪ್ಪನವರ್**

ಪಿ.ಆರ್. 295

ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

**ವಿಷಯ:** ಮೆ:: ಸೃಷ್ಠಿ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಯವರಿಗೆ 6.00 ಮೆಗಾ ವ್ಯಾಟ್ ಸಾಮರ್ಥ್ಯದ ಬೈಪಾಡಿ ಕಿರು ಜಲ ವಿದ್ಯುತ್ ಯೋಜನೆಗಾಗಿ ಕಾಲಾವಕಾಶ ವಿಸ್ತರಣೆ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಇಂಇ 439 ಎನ್‌ಸಿಇ 2004 ದಿನಾಂಕ: 5.1.2005.
2) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ಬೈಪಾಡಿ/2007/1843 ಮತ್ತು 2846 ದಿನಾಂಕ: 13.8.2007 ಮತ್ತು 7.1.2008.

**ಪ್ರಸ್ತಾವನೆ :–**

ಮೇಲೆ ಓದಲಾದ ಕ್ರಮಾಂಕ (1)ರ ಆದೇಶದಲ್ಲಿ ಮೆ:: ಸೃಷ್ಠಿ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ ತಾಲ್ಲೂಕಿನ ಬೈಪಾಡಿ ಬಳಿ ಬೆಳ್ತಂಗಡಿ ಹೊಳೆಗೆ ಅಡ್ಡಲಾಗಿ 6.00 ಮೆಗಾ ವ್ಯಾಟ್ ಸಾಮರ್ಥ್ಯದ ಬೈಪಾಡಿ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

ಮೇಲೆ ಓದಲಾದ ಕ್ರಮಾಂಕ (2)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಮೆ:: ಸೃಷ್ಠಿ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಕಾಮಗಾರಿ ಆರಂಭಿಸುವ ಸಮಯದಲ್ಲಿ ಹೆಚ್ಚು ಮಳೆಯಾದ ಕಾರಣದಿಂದ ಯೋಜನೆಯನ್ನು ಸಕಾಲದಲ್ಲಿ ಅನುಷ್ಠಾನ ಮಾಡಲು ಸಾಧ್ಯವಾಗಿರುವುದಿಲ್ಲವೆಂದು

ತಿಳಿಸಿರುವ ಹಿನ್ನೆಲೆಯಲ್ಲಿ ಅಭಿವೃದ್ಧಿದಾರರ ಕೋರಿಕೆ ಮೇರೆಗೆ ಕಾಲಾವಕಾಶವನ್ನು 27.4.2008 ರಿಂದ ಮುಂದಿನ 36 ತಿಂಗಳ ಅವಧಿಗೆ ವಿಸ್ತರಿಸಲು ಶಿಫಾರಸ್ಸು ಮಾಡಿರುತ್ತಾರೆ.

ಮೇಲಿನ ಶಿಫಾರಸ್ಸನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 288 ಎನ್‌ಸಿಇ 2007, ಬೆಂಗಳೂರು, ದಿನಾಂಕ: 13ನೇ ಫೆಬ್ರವರಿ 2008**

ಸರ್ಕಾರವು ಮೆ:: ಸೃಷ್ಠಿ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ ತಾಲ್ಲೂಕಿನ ಬೈಪಾಡಿ ಬಳಿ ಬೆಳ್ತಂಗಡಿ ಹೊಳೆಗೆ ಅಡ್ಡಲಾಗಿ ಹಂಚಿಕೆ ಮಾಡಿರುವ 6.00 ಮೆಗಾ ವ್ಯಾಟ್ ಸಾಮರ್ಥ್ಯದ ಬೈಪಾಡಿ ಕಿರು ಜಲ ವಿದ್ಯುತ್ ಯೋಜನೆಯನ್ನು ಅನುಷ್ಠಾನ ಮಾಡಲು ಕಾಲಾವಕಾಶವನ್ನು ದಿನಾಂಕ: 27.4.2008 ರಿಂದ 26.4.2011 ರ (36 ತಿಂಗಳು) ಅವಧಿಗೆ ವಿಸ್ತರಿಸಿದೆ.

ಮೇಲೆ ಓದಲಾದ ಕ್ರಮಾಂಕ (1)ರ ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರೆಯುತ್ತವೆ.

ಭಾರತದ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರೇಶ್.ಬಿ.ಕೃಷ್ಣಪ್ಪನವರ್**

ಪಿ.ಆರ್. 296 ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ.ರಾಮಣ್ಣ, ಪಿ.ಎಸ್.ಐ., ಕವಿತಾಳ ಪೊಲೀಸ್ ಠಾಣೆ, ರಾಯಚೂರು, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**

1. ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧಿಕಾರಿಗಳು, ರಾಯಚೂರು ಜಿಲ್ಲೆ ಇವರ ಆದೇಶ ಸಂಖ್ಯೆ:ಸಿಬ್ಬಂದಿ(3) ಪಿಆರ್ 66/2006 ದಿ:22-08-2006.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ ಇವರ ಆದೇಶ ಸಂಖ್ಯೆ:ಅಪೀಲು 51/ಈವ/2006 ದಿನಾಂಕ:20-10-2007
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:09-06-2007
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು(2)36/2007-08 ದಿನಾಂಕ:07-12-2007
5. ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ: PSC 247 CNS 2007 ದಿನಾಂಕ:24-01-2008.

**ಪ್ರಸ್ತಾವನೆ:**

ಶ್ರೀ.ರಾಮಣ್ಣ, ಪಿ.ಎಸ್.ಐ., ಕವಿತಾಳ ಪೊಲೀಸ್ ಠಾಣೆ, ರಾಯಚೂರು, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965/89ರ ನಿಯಮ 7ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:-**

ಶ್ರೀ ರಾಮಣ್ಣ, ಪಿ.ಎಸ್.ಐ, ಕವಿತಾಳ ಪೊಲೀಸ್ ಠಾಣೆ, ರಾಯಚೂರು ಜಿಲ್ಲೆ, ಹಿಂದೆ ಮಾರ್ಕೆಟಯಾರ್ಡ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಗುನ್ನೆ ನಂ.42/2006 ಪ್ರಕರಣವನ್ನು ತನಿಖೆ ಮಾಡಿ ದಿನಾಂಕ:10–04–2006 ರಂದು ವರದಿಯನ್ನು ತಯಾರಿಸಿ ಈ ಪ್ರಕರಣದಲ್ಲಿ 307 ಐ.ಪಿ.ಸಿ ಕಲಂಅನ್ನು ಕೈಬಿಡಲು ಅನುಮತಿಗಾಗಿ ಕೋರಿ ಜಿಲ್ಲಾ ಪೊಲೀಸ್ ಕಛೇರಿಗೆ ವರದಿಯನ್ನು ಸಲ್ಲಿಸಿರುವಿರಿ. ಆದರೆ ಈ ಕಛೇರಿಯಿಂದ ಯಾವುದೇ ಆದೇಶಕ್ಕಾಗಿ ಕಾಯದೇ ದಿನಾಂಕ:29–04–06 ರಂದು ನೀವು 307 ಐ.ಪಿ.ಸಿ ಕಲಂಅನ್ನು ಕೈಬಿಟ್ಟು ಆರೋಪಿಗಳ ವಿರುದ್ಧ ದೋಷಾರೋಪಣ ಪತ್ರವನ್ನು ಸಲ್ಲಿಸಿ ನಿಯಮ ಉಲ್ಲಂಘನೆ ಮಾಡಿ ಕರ್ತವ್ಯದಲ್ಲಿ ಬೇಜವಾಬ್ದಾರಿ, ಅಧಿಕಾರ ದುರುಪಯೋಗ ಪ್ರದರ್ಶಿಸಿರುವಿರಿ ಎಂದು ಆರೋಪ ಹೊರಿಸಲಾಗಿದೆ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧಿಕಾರಿಗಳು, ರಾಯಚೂರು ಜಿಲ್ಲೆ ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 22-08-2006ರ ಆದೇಶದಲ್ಲಿ ಅರ್ಜಿದಾರರ ಮುಂದಿನ ಎರಡು(2) ವಾರ್ಷಿಕ ವೇತನ ಬಡ್ತಿಗಳನ್ನು ಮುಂಬರುವ ವಾರ್ಷಿಕ ವೇತನ ಬಡ್ತಿಗಳಿಗೆ ಪರಿಣಾಮ ಬೀರದಂತೆ ಮುಂದೂಡಲಾಗಿದೆ ಎಂದು ಆದೇಶಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿ ಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:20.10.2007ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿ ಕಲಂ 307ನ್ನು ಕೈಬಿಡುವ ಬಗ್ಗೆ ಸಿಬಿಐ, ಡಿಎಸ್‌ಪಿ ಮತ್ತು ಮೇಲಾಧಿಕಾರಿಗಳ ಗಮನಕ್ಕೆ ತರದೆ ಲೋಪವೆಸಗಿರುವುದು ಕಂಡುಬರುತ್ತದೆ. ಆದರೆ ಇದೇ ರೀತಿಯ ಪ್ರಕರಣದಲ್ಲಿ ಇನ್ನೊಬ್ಬ ಆರೋಪಿಗೆ, ಅವರು ಹೊಸದಾಗಿ ಕೆಲಸಕ್ಕೆ ಸೇರಿರುವುದರಿಂದ ಮತ್ತು ಅನುಭವದ ಕೊರತೆ ಇರುವುದರಿಂದ ಅವರಿಗೆ ಕೇವಲ 6 ತಿಂಗಳ ಕಾಲ ವಾರ್ಷಿಕ ವೇತನ ಬಡ್ತಿಯನ್ನು ಮುಂದುವರೆಸುವ ಶಿಕ್ಷೆ ನೀಡಲಾಗಿದೆ. ಆದರೆ ಇದೇ ಆರೋಪಕ್ಕೆ ಅರ್ಜಿದಾರರಿಗೆ 2 ವಾರ್ಷಿಕ ವೇತನ ಬಡ್ತಿಗಳನ್ನು ಮುಂದೂಡಿದ ಶಿಕ್ಷೆ ವಿಧಿಸಲಾಗಿದೆ. ಒಂದೇ ದೋಷಾರೋಪಣ ಪಟ್ಟಿಗೆ ಒಂದೇ ಶಿಸ್ತು ಪ್ರಾಧಿಕಾರವು ಒಂದೇ ದಿನಾಂಕದಂದು 2 ಬೇರೆ ಬೇರೆ ಶಿಕ್ಷೆಗಳನ್ನು ವಿಧಿಸಿರುವುದು ಕಂಡು ಬರುತ್ತದೆ. ಶಿಸ್ತು ಪ್ರಾಧಿಕಾರವು ದಿ:22-08-2006ರಲ್ಲಿ ನೀಡಿರುವ ದಂಡನಾದೇಶವನ್ನು ರದ್ದುಪಡಿಸಿ, ಇವರ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗೆ ಪರಿಣಾಮ ಬೀರದಂತೆ 6 ತಿಂಗಳ ಕಾಲ ಮುಂದೂಡುವಂತೆ ಪರಿಗಣಿಸಲು ಕರ್ನಾಟಕ ಲೋಕ ಸೇವಾ ಆಯೋಗದ ಅನುಮೋದನೆಗಾಗಿ ಕೋರಲಾಗಿದ್ದು, ಆಯೋಗವು ದಿ:24-01-2008ರ ತನ್ನ ಪತ್ರದಲ್ಲಿ ಸರ್ಕಾರದ ಪ್ರಸ್ತಾವನೆಗೆ ಸಹಮತಿಯನ್ನು ನೀಡಿದೆ. ಅದರಂತೆ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 388 ಪೊಸಿಅ 2007 ಬೆಂಗಳೂರು, ದಿನಾಂಕ:02ನೇ ಫೆಬ್ರವರಿ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965/89 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ.ರಾಮಣ್ಣ, ಪಿ.ಎಸ್.ಐ., ಕವಿತಾಳ ಪೊಲೀಸ್ ಠಾಣೆ, ರಾಯಚೂರು, ಇವರ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗೆ ಪರಿಣಾಮ ಬೀರದಂತೆ 6 ತಿಂಗಳ ಕಾಲ ಮುಂದೂಡಲಾಗಿದೆ ಎಂದು ಆದೇಶಿಸಿದೆ.

ಈ ಆದೇಶವು ಶಿಸ್ತು ಪ್ರಾಧಿಕಾರ ಹೊರಡಿಸಿದ ಆದೇಶದ ದಿನಾಂಕದಿಂದಲೇ ಜಾರಿಗೆ ಬರುತ್ತದೆ.

ಈ ಆದೇಶವನ್ನು ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ: PSC 247 CNS 2007 ದಿನಾಂಕ:24.01.2008 ರಲ್ಲಿಯ ಸಹಮತಿಯೊಂದಿಗೆ ಹೊರಡಿಸಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ**

ಪಿ.ಆರ್. 253

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

ವಿಷಯ: ಶ್ರೀ ಬಿ.ಕೆ.ನೀಲನಾಯಕ್, ಮಾಜಿ ಪಿಸಿ–397, ಶಿಗ್ಗಾಂವ್ ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

ಓದಲಾಗಿದೆ:
1. ಶಿಸ್ತು ಪ್ರಾಧಿಕಾರಿ ಹಾಗೂ ಕಮಾಂಡೆಂಟ್, 10ನೇ ಪಡೆ, ಕೆ.ಎಸ್.ಆರ್.ಪಿ, ಶಿಗ್ಗಾಂವ್ ಇವರ ಆದೇಶ ಸಂಖ್ಯೆ: 04/ಡಿಇ(2)/2003–04 ದಿನಾಂಕ: 30–11–2005.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೆಎಸ್‌ಆರ್‌ಪಿ, ಬೆಂಗಳೂರು ಇವರ ಆದೇಶ ಸಂಖ್ಯೆ: ಅಪೀಲು/39/2005–06 ದಿನಾಂಕ: 18.07.2006.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ:30–08–2006.
4. ಮಹಾ ನಿರ್ದೇಶಕರು ಮತ್ತು ಪೊಲೀಸ್ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)90/2006–07 ದಿನಾಂಕ: 15–12–2006.
5. ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ PSC 215 CNS 2007 dated:25.01.2008.

**ಪ್ರಸ್ತಾವನೆ:**

ಶ್ರೀ ಬಿ.ಕೆ.ನೀಲನಾಯಕ್, ಮಾಜಿ ಪಿಸಿ–397, ಶಿಗ್ಗಾಂವ್ ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್(ಶಿಸ್ತು ನಿಯಮಗಳು) ನಿಯಮಾವಳಿ 1965/89 ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:–**

1) ಆರೋಪಿತ ಪೊಲೀಸ್ ಅಧಿಕಾರಿ ಶ್ರೀ ಬಿ.ಕೆ.ನೀಲನಾಯಕ್, ಮಾಜಿ ಪಿಸಿ–397, ಶಿಗ್ಗಾಂವ್ ಮತ್ತು ಶ್ರೀ ಬಸವರಾಜ ತಂದೆ ಡೊಂಗ್ರೆಪ್ಪ ಶಿರಗುಂಪಿ ಎಂಬುವವರೊಂದಿಗೆ ಸೇರಿಕೊಂಡು ದಿನಾಂಕ:31–03–2003 ರಂದು ಸಮಯ ಸುಮಾರು 23.30 ಗಂಟೆಯಲ್ಲಿ ಶ್ರೀ.ಶೈಲ ಮಹಾಂತಪ್ಪ ಅಲೇಂಘಾವಿ ಎಂಬುವವರ ಟಿಪ್ಪರ್ ವಾಹನವನ್ನು ಬಾಗಲಕೋಟೆ ಶಹರ ಪೊಲೀಸ್ ಠಾಣೆ ಸರಹದ್ದಿನ ನವನಗರ ಬೈಪಾಸ್ ರೋಡ್ ಕಾಳಿದಾಸ ಹೈಸ್ಕೂಲ್ ಹತ್ತಿರ ಟಿಪ್ಪರ್ ವಾಹನಕ್ಕೆ ಕೈ ಮಾಡಿ ನಿಲ್ಲಿಸಲು ಸೂಚಿಸಿ ಪಿರ್ಯಾದಿಗೆ ಪೆಟ್ರೋಲ್ ಕೇಳಿದಾಗ ಪೆಟ್ರೋಲ್ ಇಲ್ಲ ಡಿಸೇಲ್ ಇರುತ್ತದೆ ಅಂತಾ ಹೇಳಿದ್ದಕ್ಕೆ ನೀವು ಸಿಟ್ಟಾಗಿ ಮಗನೇ ನಾನು ಪೊಲೀಸ್ ಇದ್ದಿನಿ ನನಗೆ ತಿರುಗಿ ಮಾತಾಡುತ್ತೀಯಾ ಅಂತಾ ಟಿಪ್ಪರ್ ಚಾಲಕನ ಎದೆಯ ಮೇಲಿನ ಅಂಗೀ ಹಿಡಿದು ಕೆಳಗೆ ಜಗ್ಗಿ ಅಲ್ಲಿ ಇದ್ದ ಕಲ್ಲಿನಿಂದ ಕಪಾಳಕಕ್ಕೆ, ಬೆನ್ನಿಗೆ ಹೊಡೆದು ಗಾಯಗೊಳಿಸಿ ಶಿಸ್ತಿನ ಪೊಲೀಸ್ ಇಲಾಖೆಯಲ್ಲಿ ಸೇವೆ ಸಲ್ಲಿಸುತ್ತಿರುವ ನೀವು ಪೊಲೀಸ್ ಪೇದೆ ಹುದ್ದೆಗೆ ಯೋಗ್ಯವಲ್ಲದ ರೀತಿಯಲ್ಲಿ ವರ್ತಿಸಿ ಘೋರವಾದ ಕೃತ್ಯವನ್ನು ಎಸಗಿ, ದುರ್ನಡತೆ ಮತ್ತು ಬೇಜವಾಬ್ದಾರಿತನ ತೋರಿರುವ ಬಗ್ಗೆ ಆರೋಪ ಹೊರಿಸಿದೆ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ಶಿಸ್ತು ಪ್ರಾಧಿಕಾರಿ ಹಾಗೂ ಕಮಾಂಡೆಂಟ್, 10ನೇ ಪಡೆ, ಕೆ.ಎಸ್.ಆರ್.ಪಿ, ಶಿಗ್ಗಾಂವ್ ಇವರು ಮೇಲೆ ಕ್ರಮ ಸಂಖ್ಯೆ:(1) ರಲ್ಲಿ ಓದಲಾದ ದಿನಾಂಕ:30–11–2005ರ ಆದೇಶದಲ್ಲಿ ಅರ್ಜಿದಾರರನ್ನು ದಿನಾಂಕ:01–04–03 ರಿಂದ 03–04–03 ರವರೆಗಿನ ಅನಧೀಕೃತ ಗೈರುಹಾಜರಾದ ಅವಧಿ 3 ದಿನಗಳನ್ನು ವೇತನ ರಹಿತ ರಜೆ ಎಂದು ಪರಿಗಣಿಸಿದೆ ಹಾಗೂ ದಿನಾಂಕ:04–04–2003 ರಿಂದ 19–07–2003 ರವರೆಗಿನ ಅವಧಿಯನ್ನು ಅಮಾನತ್ತೆಂದು ಪರಿಗಣಿಸಿ ಇವರನ್ನು ತಕ್ಷಣದಿಂದ ಸೇವೆಯಿಂದ ವಜಾ ಮಾಡಲಾಗಿದೆ ಎಂದು ಆದೇಶಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೆಎಸ್‌ಆರ್‌ಪಿ, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ: (2) ರಲ್ಲಿ ಓದಲಾದ ದಿನಾಂಕ: 18–07–2006 ರಲ್ಲಿ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿ, ಆ.ಪೊ.ಅ ವಿರುದ್ಧ ದಾಖಲಾದ ಕ್ರಿಮಿನಲ್ ಮೊಕದ್ದಮೆಯಲ್ಲಿ ನ್ಯಾಯಾಲಯವು ತಮ್ಮನ್ನು ಆರೋಪದಿಂದ ಮುಕ್ತರನ್ನಾಗಿ ಮಾಡಿರುವುದರಿಂದ ಪರಿಷ್ಕರಣ ಮೇಲ್ಮನವಿಯನ್ನು ಪುರಸ್ಕರಿಸಲು ಕೋರಿರುತ್ತಾರೆ. ಅರ್ಜಿದಾರರ ಈ ವಾದವು ಸಮಂಜಸವಾಗಿರುವುದಿಲ್ಲ, ಏಕೆಂದರೆ ಈ ಪ್ರಕರಣವನ್ನು ಲೋಕ್ ಅದಾಲತ್‌ಗೆ ವರ್ಗಾಯಿಸಿದ್ದು, ರಾಜಿ ಸಂಧಾಲನದ ಮೂಲಕ ಪ್ರಕರಣ ಇತ್ಯರ್ಥವಾಗಿರುವುದು ಕಂಡು ಬರುತ್ತದೆ. ಅಲ್ಲದೆ, ನ್ಯಾಯಾಲಯದ ಪ್ರಕರಣ ಮತ್ತು ಇಲಾಖಾ ವಿಚಾರಣೆಗಳು ಬೇರೆಬೇರೆ ಪ್ರಕ್ರಿಯೆಗಳಾಗಿರುತ್ತವೆ. ಈ ಪ್ರಕರಣದಲ್ಲಿ ಅರ್ಜಿದಾರರು ಪೆಟ್ರೋಲ್ ಪಡೆಯುವ ಬಗ್ಗೆ ಜಗಳ ಮಾಡಿದ್ದಕ್ಕೆ ಮಾತ್ರ ದೋಷಾರೋಪಣೆ ಹೊರಿಸಿ ಇಲಾಖಾ ವಿಚಾರಣೆ ಮಾಡಿ ಇವರನ್ನು ಸೇವೆಯಿಂದ ವಜಾಗೊಳಿಸುವ ಶಿಕ್ಷೆಯು ದೊಡ್ಡ ಪ್ರಮಾಣದ ಶಿಕ್ಷೆಯಾಗಿರುತ್ತದೆ. ಇವರು ಇಲಾಖಾ ಪರೀಕ್ಷೆ ಪಾಸು ಮಾಡದಿದ್ದರೆ ಆ ಬಗ್ಗೆ ಪ್ರತ್ಯೇಕ ಕ್ರಮ ಜರುಗಿಸಬಹುದಾಗಿರುತ್ತದೆ. ಇಲಾಖಾ ವಿಚಾರಣೆಯಲ್ಲಿ ಇವರ ವಿರುದ್ಧ ಹೊರಿಸಲಾದ ದೋಷಾರೋಪಣೆಗಳು ಸಾಬೀತಾಗಿದ್ದರೂ ಸಹ ಸೇವೆಯಿಂದ ವಜಾ ಮಾಡಿರುವ ಶಿಕ್ಷೆಯು ದೊಡ್ಡ ಪ್ರಮಾಣದ ಶಿಕ್ಷೆಯಾಗಿರುವುದರಿಂದ ಅರ್ಜಿದಾರರ ಪರಿಷ್ಕರಣ ಮೇಲ್ಮನವಿಯನ್ನು ಪುರಸ್ಕರಿಸಿ ಶಿಸ್ತು ಪ್ರಾಧಿಕಾರದ ಆದೇಶವನ್ನು ಮಾರ್ಪಡಿಸಲು ಕರ್ನಾಟಕ ಲೋಕ ಸೇವಾ ಆಯೋಗದ ಅನಮೋದನೆಗಾಗಿ ಕೋರಲಾಗಿದ್ದು, ಆಯೋಗವು ದಿನಾಂಕ:25–01–2008ರ ತನ್ನ ಪತ್ರದಲ್ಲಿ ಸರ್ಕಾರದ ಪ್ರಸ್ತಾವನೆಗೆ ಸಹಮತಿಯನ್ನು ನೀಡಿದೆ. ಅದರಂತೆ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 261 ಮೊಸಿಅ 2007, ಬೆಂಗಳೂರು, ದಿ:2ನೇ ಫೆಬ್ರವರಿ 2008**

ಪ್ರಸ್ತಾವನೆಯಲ್ಲಿ ವಿವರಿಸಲಾದ ಎಲ್ಲಾ ಅಂಶಗಳನ್ನು ಕೂಲಂಕುಷವಾಗಿ ಪರಿಶೀಲಿಸಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965/89 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಬಿ.ಕೆ.ನೀಲನಾಯಕ್, ಮಾಜಿ ಪಿಸಿ–397, ಶಿಗ್ಗಾಂವ್ ಇವರನ್ನು

1. ಸೇವೆಗೆ ಪುನರ್ ನೇಮಕ ಮಾಡುವುದು.
2. ಅಮಾನತ್ತಿನ ಅವಧಿಯನ್ನು ಅಮಾನತ್ತೇಂದೇ ಪರಿಗಣಿಸುವುದು.
3. ಸೇವೆಯಿಂದ ಹೊರಗುಳಿದ ಅವಧಿಯನ್ನು ಅವರ ವೇತನ ರಹಿತ ರಜೆಯೆಂದು ಪರಿಗಣಿಸುವುದು.
4. ವೇತನವನ್ನು ಅವರ ವೇತನ ಶ್ರೇಣಿಯ ಕನಿಷ್ಟ ಮಟ್ಟಕ್ಕೆ 2 ವರ್ಷಗಳ ಅವಧಿಗೆ ಇಳಿಸಿ ದಂಡನಾವಧಿ ಮುಗಿದ ನಂತರ ದಂಡನಾವಧಿಯ ಹಿಂದಿನ ದಿನ ಅವರು ಪಡೆಯುತ್ತಿದ್ದ ವೇತನಕ್ಕೆ ಅವರ ವೇತನವನ್ನು ನಿಗಧಿಪಡಿಸಿ ಹೊಸದಾಗಿ ವೇತನ ಮುಂಬಡ್ತಿ ಪಡೆಯಲು ಅರ್ಹರಾಗಿರುತ್ತಾರೆ ಎಂಬ ಶಿಕ್ಷೆ ವಿಧಿಸುವುದು.

ಈ ಆದೇಶವು ಶಿಸ್ತು ಪ್ರಾಧಿಕಾರ ಹೊರಡಿಸಿದ ಆದೇಶದ ದಿನಾಂಕದಿಂದಲೇ ಜಾರಿಗೆ ಬರುತ್ತದೆ.

ಈ ಆದೇಶವನ್ನು ಕರ್ನಾಟಕ ಲೋಕ ಸೇವಾ ಆಯೋಗದ ಪತ್ರದ ಸಂಖ್ಯೆ: ಪಿಎಸ್‌ಸಿ 215 ಸಿಎನ್‌ಎಸ್ 2007 ದಿನಾಂಕ: 24–01–2008 ರನ್ವಯ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ಎ. ಕುಲಕರ್ಣಿ**
ಪಿ.ಆರ್. 254 ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಕೆ.ಪ್ರಭಾಕರ್, ಪಿ.ಎಸ್.ಐ, ನಂಜನಗೂಡು ರೂರಲ್ ಪೊಲೀಸ್ ಠಾಣೆ, ಮೈಸೂರು ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಸೂಪರಿಂಟೆಂಡೆಂಟ್, ಮೈಸೂರು ಜಿಲ್ಲೆ ಇವರ ಆದೇಶ ಸಂಖ್ಯೆ: ಶಿಕ್ಷೆ/ಜೆಎಸ್/50/06–07 ದಿನಾಂಕ: 28–09–2006.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು ಇವರ ಆದೇಶ ಸಂಖ್ಯೆ: ಅಪೀಲು/31/2006–07 ದಿನಾಂಕ: 15–02–2007.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ:13–08–2007.
4. ಮಹಾ ನಿರ್ದೇಶಕರು ಮತ್ತು ಪೊಲೀಸ್ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)72/2007–08 ದಿನಾಂಕ: 12–11–2007.
5. ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ PSC 220 CNS 2007 dated:25.01.2008.

**ಪ್ರಸ್ತಾವನೆ:**

ಶ್ರೀ ಕೆ.ಪ್ರಭಾಕರ್, ಪಿಎಸ್ಐ, ನಂಜನಗೂಡು ರೂರಲ್ ಪೊಲೀಸ್ ಠಾಣೆ, ಮೈಸೂರು ಜಿಲ್ಲೆ ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್(ಶಿಸ್ತು ನಿಯಮಗಳು) ನಿಯಮಾವಳಿ 1965/89 ನಿಯಮ 7 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:–**

1) ಆರೋಪಿತ ಪೊಲೀಸ್ ಅಧಿಕಾರಿ ಶ್ರೀ ಕೆ.ಪ್ರಭಾಕರ್, ಪಿಎಸ್ಐ, ನಂಜನಗೂಡು ರೂರಲ್ ಪೊಲೀಸ್ ಠಾಣೆ, ಮೈಸೂರು ಜಿಲ್ಲೆ ಇವರು ದಿನಾಂಕ:14–07–2006 ರಂದು ಪೊಲೀಸ್ ಉಪಾಧೀಕ್ಷಕರು, ನಂಜನಗೂಡು ನಡೆಸಿದ ವಾರದ ಕವಾಯಿತಿಗೆ ಅನಧಿಕೃತವಾಗಿ ಗೈರು ಹಾಜರಾಗಿರುವ ಮೂಲಕ ಕರ್ತವ್ಯದಲ್ಲಿ ಬೇಜವಾಬ್ದಾರಿ, ನಿರ್ಲಕ್ಷತೆ ಮತ್ತು ಅಶಿಸ್ತು ತೋರಿರುವ ಬಗ್ಗೆ ಆರೋಪ ಹೊರಿಸಿದೆ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಸೂಪರಿಂಟೆಂಡೆಂಟ್, ಮೈಸೂರು ಜಿಲ್ಲೆ ಇವರು ಮೇಲೆ ಕ್ರಮ ಸಂಖ್ಯೆ:(1) ರಲ್ಲಿ ಓದಲಾದ ದಿನಾಂಕ:28–09–2006ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ನಂತರದ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ಆರು(6) ತಿಂಗಳ ಕಾಲ ಮುಂದೂಡಲಾಗಿದೆ ಎಂದು ಆದೇಶಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು ಇವರು ಮೇಲೆ ಕ್ರಮ ಸಂಖ್ಯೆ:(2) ರಲ್ಲಿ ಓದಲಾದ ದಿನಾಂಕ: 15–02–2007 ರಲ್ಲಿ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿ, ಅ.ಪೊ.ಅ ರವರು ಡಯಾಬಿಟಿಕ್ ರೋಗಿಯಾಗಿದ್ದು ಚಿಕಿತ್ಸೆ ಪಡೆಯುವ ಸಲುವಾಗಿ 1 ದಿವಸ ಕವಾಯಿತಿಗೆ ಗೈರು ಹಾಜರಾಗಿರುವುದು ಕಂಡು ಬರುತ್ತದೆ. ಇದಕ್ಕಾಗಿ ಇವರಿಗೆ ವಿಧಿಸಿರುವ ಶಿಕ್ಷೆಯು ಹೆಚ್ಚಿನ ಪ್ರಮಾಣದ ಶಿಕ್ಷೆಯಾಗಿದ್ದು, ಆದ್ದರಿಂದ ಅರ್ಜಿದಾರರ ಪರಿಷ್ಕರಣ ಮೇಲ್ಮನವಿಯನ್ನು ಪುರಸ್ಕರಿಸಿ ಶಿಸ್ತು ಪ್ರಾಧಿಕಾರದ ಆದೇಶವನ್ನು ರದ್ದುಪಡಿಸು ಕರ್ನಾಟಕ ಲೋಕ ಸೇವಾ ಆಯೋಗದ ಅನಮೋದನೆಗಾಗಿ ಕೋರಲಾಗಿದ್ದು, ಆಯೋಗವು ದಿನಾಂಕ:25–01–2008ರ ತನ್ನ ಪತ್ರದಲ್ಲಿ ಸರ್ಕಾರದ ಪ್ರಸ್ತಾವನೆಗೆ ಸಹಮತಿಯನ್ನು ನೀಡಿದೆ. ಅದರಂತೆ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 348 ಪೊಸಿಅ 2007, ಬೆಂಗಳೂರು ದಿ:2ನೇ ಫೆಬ್ರವರಿ 2008**

ಪ್ರಸ್ತಾವನೆಯಲ್ಲಿ ವಿವರಿಸಲಾದ ಎಲ್ಲಾ ಅಂಶಗಳನ್ನು ಕೂಲಂಕುಷವಾಗಿ ಪರಿಶೀಲಿಸಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965/89 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಕೆ.ಪ್ರಭಾಕರ್, ಪಿಎಸ್ಐ, ನಂಜನಗೂಡು ರೂರಲ್ ಪೊಲೀಸ್ ಠಾಣೆ, ಮೈಸೂರು ಜಿಲ್ಲೆ ಇವರನ್ನು ಆರೋಪದಿಂದ ಮುಕ್ತರನ್ನಾಗಿ ಮಾಡಿ ವೇತನವನ್ನು ಸಕ್ರಮಗೊಳಿಸಲು ಆದೇಶಿಸಿದೆ.

ಈ ಆದೇಶವು ಶಿಸ್ತು ಪ್ರಾಧಿಕಾರ ಹೊರಡಿಸಿದ ಆದೇಶದ ದಿನಾಂಕದಿಂದಲೇ ಜಾರಿಗೆ ಬರುತ್ತದೆ.

ಈ ಆದೇಶವನ್ನು ಕರ್ನಾಟಕ ಲೋಕ ಸೇವಾ ಆಯೋಗದ ಪತ್ರದ ಸಂಖ್ಯೆ: ಪಿಎಸ್‌ಸಿ 220 ಸಿಎನ್‌ಎಸ್ 2007 ದಿನಾಂಕ: 24–01–2008 ರನ್ವಯ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ಎ. ಕುಲಕರ್ಣಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. 255

**ವಿಷಯ:** ಶ್ರೀ ಡಿ.ಧನಂಜಯ, ಸಿಪಿಐ, ಮೈಸೂರು ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಆರಕ್ಷಕ ಅಧೀಕ್ಷಕರು, ಮೈಸೂರು ಇವರ ಆದೇಶ ಸಂಖ್ಯೆ: ಶಿಕ್ಷೆ/138/2005–06 ದಿನಾಂಕ: 26–05–2006.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು ಇವರ ಆದೇಶ ಸಂಖ್ಯೆ: ಅಪೀಲು/05/2006–07 ದಿನಾಂಕ: 25–09–2006.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ:08–01–2007.
4. ಮಹಾ ನಿರ್ದೇಶಕರು ಮತ್ತು ಪೊಲೀಸ್ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಸಿಬಿ(8)11/2007–08 ದಿನಾಂಕ 27–06–2007.
5. ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ PSC 225 CNS 2007 dated: 24–01–2008.

**ಪ್ರಸ್ತಾವನೆ:**

ಶ್ರೀ ಡಿ.ಧನಂಜಯ, ಸಿಪಿಐ, ಮೈಸೂರು ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್(ಶಿಸ್ತು ನಿಯಮಗಳು) ನಿಯಮಾವಳಿ 1965/89 ನಿಯಮ 7 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:–**

1) ಆರೋಪಿತ ಪೊಲೀಸ್ ಅಧಿಕಾರಿ ಶ್ರೀ ಡಿ.ಧನಂಜಯ, ಸಿಪಿಐ, ಮೈಸೂರು ಇವರ ಮೇಲೆ ಡಿ.ವೈ.ಎಸ್.ಪಿ, ಮೈಸೂರು ಗ್ರಾಮಾಂತರ ಉಪ ವಿಭಾಗ ರವರ ವರದಿಯ ಆಧಾರದ ಮೇರೆಗೆ, ಕೆ.ಆರ್.ನಗರ ಪೊಲೀಸ್ ಠಾಣೆ ಯು.ಡಿ.ಆರ್ ಸಂಖ್ಯೆ:32/05 ಕಲಂ 174 ಸಿ.ಆರ್.ಪಿ.ಸಿ ಪ್ರಕರಣದಲ್ಲಿ, ತನಿಖಾ ಅಧಿಕಾರಿಯಾಗಿದ್ದ, ಪಿ.ಎಸ್.ಐ (ಕಾ ಮತ್ತು ಸು), ಕೆ.ಆರ್.ನಗರ ಠಾಣೆ ರವರು ಸದರಿ ಪ್ರಕರಣದಲ್ಲಿ ಕೊಲೆಯಾದ ವ್ಯಕ್ತಿಯ ರಕ್ತ ಸಂಬಂಧಿಗಳು ಅನುಮಾನ ಪಟ್ಟಿರುವ ಅಸಾಮಿಗಳನ್ನು ಕೂಲಂಕುಷವಾಗಿ ವಿಚಾರಣೆಗೆ ಒಳಪಡಿಸಿ, ಸತ್ಯತೆಯನ್ನು ಬಯಲಿಗೆಳೆಯುವ ಪ್ರಯತ್ನ ಮಾಡದೇ ಇರುವುದು ಮತ್ತು ವ್ಯಕ್ತಿ ಹಾಗೂ ಬಿಳಿಕೆರೆ ಮಂಜುಳಾರವರ ಮಧ್ಯೆ ಪ್ರೇಮ ಪ್ರಸಂಗದ ಬಗ್ಗೆ ಸಂಬಂಧಪಟ್ಟವರ ಹೇಳಿಕೆ ಪಡೆದು ಸಾಕ್ಷಿ ಸಂಗ್ರಹಿಸಲು ಪ್ರಯತ್ನಿಸದೇ ಮತ್ತು ಮೃತನ ಸಾವಿನ ಬಗ್ಗೆ ಶವ ಪರೀಕ್ಷೆ ನಡೆಸಿದ ವೈದ್ಯಾಧಿಕಾರಿಗಳ ಅಭಿಪ್ರಾಯ ಬರುವವರೆಗೆ ತನಿಖೆಯನ್ನು ನಡೆಸದೇ ಅನಾವಶ್ಯಕ ವಿಳಂಭ ಮಾಡಿರುವುದು ಕಂಡು ಬಂದಿರುವುದರಿಂದ, ಈ ಬಗ್ಗೆ ಸಿ.ಪಿ.ಐ, ಕೆ.ಆರ್.ನಗರ ವೃತರವರು ಅಧೀನ ಅಧಿಕಾರಿಗಳಾದ ಪಿ.ಎಸ್.ಐ (ಕಾ ಮತ್ತು ಸು) ಕೆ.ಆರ್.ನಗರ ಠಾಣೆ ರವರಿಗೆ ತನಿಖೆಯ ಸಂಬಂಧವಾಗಿ ಸೂಕ್ತ ಮಾರ್ಗದರ್ಶನ ನೀಡಲು ವಿಫಲರಾಗಿರುವುದರ ಮೂಲಕ ಕರ್ತವ್ಯ ಲೋಪವೆಸಗಿರುತ್ತಾರೆಂದು ಆರೋಪ ಹೊರಿಸಿದೆ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ಶಿಸ್ತು ಪ್ರಾಧಿಕಾರಿ ಹಾಗೂ ಆರಕ್ಷಕ ಅಧೀಕ್ಷಕರು, ಮೈಸೂರು ಇವರು ಮೇಲೆ ಕ್ರಮ ಸಂಖ್ಯೆ:(1) ರಲ್ಲಿ ಓದಲಾದ ದಿನಾಂಕ:26–09–2006ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ನಂತರದ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ಒಂದು ವರ್ಷಗಳ ಕಾಲ ಮುಂದೂಡಲಾಗಿದೆ ಎಂದು ಆದೇಶಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು ಇವರು ಮೇಲೆ ಕ್ರಮ ಸಂಖ್ಯೆ:(2) ರಲ್ಲಿ ಓದಲಾದ ದಿನಾಂಕ: 25–09–2006 ರಲ್ಲಿ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿ, ಅಧೀನ ಅಧಿಕಾರಿಗೆ ಸೂಕ್ತ ಸಲಹೆ ನೀಡದಿರುವುದಕ್ಕೆ ಈ ರೀತಿ ಶಿಕ್ಷೆ ವಿಧಿಸುವುದು ಸಮಂಜಸವಾಗಿ ಕಾಣುತ್ತಿಲ್ಲ. ಕರ್ತವ್ಯಲೋಪವಾಗಿದ್ದರೆ ಅದಕ್ಕೆ ಕಾರಣವಾದ ಅಧಿಕಾರಿಯ ಮೇಲೆ ಶಿಸ್ತು ಕ್ರಮ ಜರುಗಿಸಬಹುದಾಗಿತ್ತು. ಆದ್ದರಿಂದ

ಅರ್ಜಿದಾರರ ಪರಿಷ್ಕರಣ ಮೇಲ್ಮನವಿಯನ್ನು ಪುರಸ್ಕರಿಸಿ ಶಿಸ್ತು ಪ್ರಾಧಿಕಾರದ ಆದೇಶವನ್ನು ಮಾರ್ಪಡಿಸಿ ಮುಂದೆ ಇಂತಹ ಪ್ರಸ್ತಾವನೆಗಳಿಗೆ ಎಡೆ ಕೊಡದಂತೆ ಸೂಕ್ತ 'ಎಚ್ಚರಿಕೆ' ನೀಡುವ ಶಿಕ್ಷೆ ಪರಿಗಣಿಸಲು ಕರ್ನಾಟಕ ಲೋಕ ಸೇವಾ ಆಯೋಗದ ಅನುಮೋದನೆಗಾಗಿ ಕೋರಲಾಗಿದ್ದು, ಆಯೋಗವು ದಿನಾಂಕ:24–01–2008ರ ತನ್ನ ಪತ್ರದಲ್ಲಿ ಸರ್ಕಾರದ ಪ್ರಸ್ತಾವನೆಗೆ ಸಹಮತಿಯನ್ನು ನೀಡಿದೆ. ಅದರಂತೆ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 351 ಪೊಸಿಅ 2007, ಬೆಂಗಳೂರು, ದಿ:2ನೇ ಫೆಬ್ರವರಿ 2008**

ಪ್ರಸ್ತಾವನೆಯಲ್ಲಿ ವಿವರಿಸಲಾದ ಎಲ್ಲಾ ಅಂಶಗಳನ್ನು ಕೂಲಂಕುಷವಾಗಿ ಪರಿಶೀಲಿಸಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965/89 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಡಿ.ಧನಂಜಯ, ಸಿಪಿಐ, ಮೈಸೂರು ಇವರಿಗೆ 'ಎಚ್ಚರಿಕೆ' ನೀಡಿ ಆರೋಪದಿಂದ ಮುಕ್ತರನ್ನಾಗಿ ಮಾಡಿ ಆದೇಶಿಸಿದೆ.

ಈ ಆದೇಶವು ಶಿಸ್ತು ಪ್ರಾಧಿಕಾರ ಹೊರಡಿಸಿದ ಆದೇಶದ ದಿನಾಂಕದಿಂದಲೇ ಜಾರಿಗೆ ಬರುತ್ತದೆ.

ಈ ಆದೇಶವನ್ನು ಕರ್ನಾಟಕ ಲೋಕ ಸೇವಾ ಆಯೋಗದ ಪತ್ರದ ಸಂಖ್ಯೆ: ಪಿಎಸ್‌ಸಿ 225 ಸಿಎನ್‌ಎಸ್ 2007 ದಿನಾಂಕ: 24–01–2008 ರನ್ವಯ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ಎ. ಕುಲಕರ್ಣಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. 256

**ವಿಷಯ:** ಶ್ರೀ ಟಿ.ಮುಸ್ಸೂರಪ್ಪ, ಸಿಪಿಸಿ–1066 ಮತ್ತು ಮಹಮ್ಮದ್ ಗೌಸ್, ಚಳ್ಳಕೆರೆ ಪೊಲೀಸ್ ಠಾಣೆ, ಚಿತ್ರದುರ್ಗ ಜಿಲ್ಲೆ ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಚಿತ್ರದುರ್ಗ ಜಿಲ್ಲೆ ಇವರ ಆದೇಶ ಸಂಖ್ಯೆ: ಸಿಬ್ಬಂದಿ(2)ಇವಿ 14/2005 ದಿನಾಂಕ: 03–01–2007.
2. ಮೇಲ್ಮನವಿ ಪ್ರಾಧಿಕಾರಿ ಮತ್ತು ಪೊಲೀಸ್ ಮಹಾ ನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ ಇವರ ಆದೇಶ ಸಂಖ್ಯೆ: ಅಪೀಲು/48/ಸಿಬ್ಬಂದಿ–2/2006–07 ದಿನಾಂಕ: 21.07.2007.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ:09–10–2007.
4. ಮಹಾ ನಿರ್ದೇಶಕರು ಮತ್ತು ಪೊಲೀಸ್ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)/98/2007–08 ದಿನಾಂಕ: 19–12–2007.

**ಪ್ರಸ್ತಾವನೆ:**

ಶ್ರೀ ಟಿ.ಮುಸ್ಸೂರಪ್ಪ, ಸಿಪಿಸಿ–1066 ಮತ್ತು ಮಹಮ್ಮದ್ ಗೌಸ್, ಚಳ್ಳಕೆರೆ ಪೊಲೀಸ್ ಠಾಣೆ, ಚಿತ್ರದುರ್ಗ ಜಿಲ್ಲೆ ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್(ಶಿಸ್ತು ನಿಯಮಗಳು) ನಿಯಮಾವಳಿ 1965/89 ನಿಯಮ 6 ಅಧಿನಿಯಮ(2) ಮತ್ತು 8 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:–** ಶ್ರೀ ಟಿ.ಮುಸ್ಸೂರಪ್ಪ, ಸಿಪಿಸಿ–1066 ಮತ್ತು ಮಹಮ್ಮದ್ ಗೌಸ್, ಚಳ್ಳಕೆರೆ ಪೊಲೀಸ್ ಠಾಣೆ, ಚಿತ್ರದುರ್ಗ ಜಿಲ್ಲೆ ದಿನಾಂಕ: 25–10–2005 ರಂದು ಸಮವಸ್ತ್ರ ಧರಿಸಿಕೊಂಡು ಚಳ್ಳಕೆರೆ ಪಾವಗಡ ರಸ್ತೆಯ ಗುರು ತಿಪ್ಪೇರುದ್ರಸ್ವಾಮಿ, ಡಾಬಾ ಹೋಟೇಲ್‌ನ ಮುಂದೆ ಎಪಿ–36 ಟಿ–7273 ಮತ್ತು ಎಪಿ–20 ವಿ–7688 ಲಾರಿಗಳನ್ನು ತಡೆಗಟ್ಟಿ ಲಾರಿ ಚಾಲಕರುಗಳಿಂದ ಅಕ್ರಮವಾಗಿ ಹಣ ವಸೂಲಿ ಮಾಡಿ ಇಲಾಖೆಯ ಘನತೆ–ಗೌರವಗಳಿಗೆ ಧಕ್ಕೆ ಬರುವಂತೆ ವರ್ತಿಸಿ ಕರ್ತವ್ಯದಲ್ಲಿ ಘೋರ ದುರ್ನಡತೆ ಮತ್ತು ಅತೀವ ಬೇಜವಾಬ್ದಾರಿತನ ಪ್ರದರ್ಶಿಸಿರುತ್ತೀರಿ ಎಂದು ಆರೋಪ ಹೊರಿಸಲಾಗಿದೆ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿರುವುದಿಲ್ಲ ಎಂದು ಸಲ್ಲಿಸಿದ ವರದಿ ಅಂತಿಮ ನಿರ್ಣಯವಾಗುವುದಿಲ್ಲ ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಚಿತ್ರದುರ್ಗ ಜಿಲ್ಲೆ ಇವರು ಮೇಲೆ ಕ್ರಮ ಸಂಖ್ಯೆ:(1) ರಲ್ಲಿ ಓದಲಾದ ದಿನಾಂಕ:03–01–2007ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಭವಿಷ್ಯದ ಬಡ್ತಿಗೆ ಪರಿಣಾಮ ಬೀರುವಂತೆ ಒಂದು ವರ್ಷಕಾಲ ಮುಂದೂಡಿ ಅಮಾನತ್ತಿನಲ್ಲಿ ಕಳೆದ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ ಇವರು ಮೇಲ್ಮನವಿದಾರರ ಅರ್ಜಿಯನ್ನು ಕೂಲಂಕುಷವಾಗಿ ಪರಿಶೀಲಿಸಿ, ಪರಿಗಣಿಸುವಂತಹ ಯಾವುದೇ ಅಂಶಗಳು ಕಂಡುಬಾರದೇ ಇರುವುದರಿಂದ ಮೇಲೆ ಕ್ರಮ ಸಂಖ್ಯೆ:(2) ರಲ್ಲಿ ಓದಲಾದ ದಿನಾಂಕ:21–07–2007 ರಲ್ಲಿ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿರುತ್ತಾರೆ.

ಈ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಇಲಾಖಾ ವಿಚಾರಣೆಯಲ್ಲಿ ಇವರ ವಿರುದ್ಧ ಹೊರಿಸಲಾದ ಆರೋಪಗಳು ಸಾಬೀತಾಗಿರುವುದಿಲ್ಲ, ಅಪೀಲುದಾರರು ಕೋರಿರುವಂತೆ ವಿಚಾರಣಾಧಿಕಾರಿಗಳು ಸಲ್ಲಿಸಿದ ಮಿನಿಟ್ಸ್ ಅಂತಿಮ ನಿರ್ಣಯವಾಗುವುದಿಲ್ಲ. ಹಾಗೂ ಅದನ್ನು ಒಪ್ಪಲೇಬೇಕೆಂಬ ನಿಬಂಧನೆಯೂ ಇರುವುದಿಲ್ಲ. ಶಿಸ್ತು ಪ್ರಾಧಿಕಾರವು ಇಂತಹ ಸಂದರ್ಭದಲ್ಲಿ ಸನ್ನಿವೇಶಕ್ಕೆ ತಕ್ಕ ಪೂರಕ ಶಿಕ್ಷೆಯನ್ನು ಆಧರಿಸಿ ಅಂತಿಮ ಆದೇಶ ಹೊರಡಿಸಿರುತ್ತಾರೆ. ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಜವಾಬ್ದಾರಿಯುತ ಪೊಲೀಸ್ ಸಿಬ್ಬಂದಿಯಾದ ಇವರುಗಳು ಸಮವಸ್ತ್ರ ಧರಿಸಿ ದಿನಾಂಕ: 25–10–2005 ಲಾರಿಗಳನ್ನು ತಡೆಗಟ್ಟಿ, ಲಾರಿ ಚಾಲಕರುಗಳಿಂದ ಅಕ್ರಮವಾಗಿ ಹಣ ವಸೂಲು ಮಾಡಿರುವುದು ದೃಢಪಟ್ಟಿರುವುದರಿಂದ ಶಿಸ್ತು ಪ್ರಾಧಿಕಾರ ವಿಧಿಸಿದ ಶಿಕ್ಷೆಯು ಸಮಂಜಸವಾಗಿರುತ್ತದೆ. ಇದನ್ನು ರದ್ದು ಪಡಿಸಲು ಯಾವುದೇ ದಾಖಲೆಗಳನ್ನು ಒದಗಿಸಿರುವುದಿಲ್ಲ.

ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯ ಕಂಡು ಬರುವುದಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 16 ಪೊಸಿಅ 2008, ಬೆಂಗಳೂರು, ದಿ:11ನೇ ಫೆಬ್ರವರಿ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965/89 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಟಿ.ಮುಸ್ವೂರಪ್ಪ, ಸಿಪಿಸಿ–1066 ಮತ್ತು ಮಹಮ್ಮದ್ ಗೌಸ್, ಚಳ್ಳಕೆರೆ ಪೊಲೀಸ್ ಠಾಣೆ, ಚಿತ್ರದುರ್ಗ ಜಿಲ್ಲೆ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣಾ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ.ಕುಲಕರ್ಣಿ**

ಪಿ.ಆರ್. 311

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಸತೀಶ್ ಎಸ್. ಪಾಟೀಲ್, ಪಿಎಸ್ಐ, ಬ್ಯಾಡಗಿ ಪೊಲೀಸ್ ಠಾಣೆ, ಬಾಗಲಕೋಟೆ ಜಿಲ್ಲೆ ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**

1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಹಾವೇರಿ ಜಿಲ್ಲೆ ಹಾವೇರಿ ಇವರ ಆದೇಶ ಸಂಖ್ಯೆ: ಪಿ.ಆರ್–2/2005 ದಿನಾಂಕ: 14–06–2005.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ ಇವರ ಹಿಂಬರಹ ಸಂಖ್ಯೆ:ಅಪೀಲು/98/ಉವ/2006 ದಿನಾಂಕ: 10–08–2006.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ:06–09–2006.
4. ಮಹಾ ನಿರ್ದೇಶಕರು ಮತ್ತು ಪೊಲೀಸ್ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)109/2006–07 ದಿನಾಂಕ: 03–01–2007.
5. ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ PSC 81 CNS 2007 dated: 24.01.2008.

**ಪ್ರಸ್ತಾವನೆ:**

ಶ್ರೀ ಸತೀಶ್ ಎಸ್. ಪಾಟೀಲ್, ಪಿಎಸ್ಐ, ಬ್ಯಾಡಗಿ ಪೊಲೀಸ್ ಠಾಣೆ, ಬಾಗಲಕೋಟೆ ಜಿಲ್ಲೆ ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್(ಶಿಸ್ತು ನಿಯಮಗಳು) ನಿಯಮಾವಳಿ 1965/89 ನಿಯಮ 7 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:–**

1) ಆರೋಪಿತ ಪೊಲೀಸ್ ಅಧಿಕಾರಿ ಶ್ರೀ ಸತೀಶ್.ಎಸ್.ಪಾಟೀಲ್, ಪಿಎಸ್ಐ, ಬ್ಯಾಡಗಿ ಪೊಲೀಸ್ ಠಾಣೆ, ಬಾಗಲಕೋಟೆ ಜಿಲ್ಲೆ ಆದ ನೀವು ಜವಾಬ್ದಾರಿಯುತ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು

ಅ) ಠಾಣೆಯ ವ್ಯಾಪ್ತಿಯಲ್ಲಿ ಪೆಟ್ರೋಲ್ ಬಂಕ್‌ಗೆ ಸಿಬ್ಬಂದಿಯವರನ್ನು ನೇಮಿಸಿರುವುದಿಲ್ಲ.

ಆ) ಬೀಟ್ ಸಿಬ್ಬಂದಿಯವರಿಗೆ ಬೀಟ್ ಕರ್ತವ್ಯಕ್ಕೆ ಮಾರ್ಚ ಮಾಡಿರುವುದಿಲ್ಲ.

ಇ) ಸಿಪಿಐ ಬ್ಯಾಡಗಿ ರವರು ರಾತ್ರಿ ಠಾಣೆಗೆ ಬರಲು ತಿಳಿಸಿದ್ದರೂ ಸಹ ಬರದೇ ಪೋನ್ ಮತ್ತು ವೈರಲೆಸ ಮುಖಾಂತರ ಸಹ ಉತ್ತರ ನೀಡದೆ ದುರ್ನಡತೆ ಪ್ರದರ್ಶಿಸಿದ ಬಗ್ಗೆ.

ಈ) ಬೀಟ್ ಪುಸ್ತಕಗಳನ್ನು ಸರಿಯಾಗಿ ನಿರ್ವಹಣೆ ಮಾಡದೆ ಮತ್ತು ಒಂದು ಬಾರಿಯೂ ಪರಿಶೀಲಿಸಿ ಸಹಿ ಮಾಡದೆ, ಘೋರ ಕರ್ತವ್ಯ ನಿರ್ಲಕ್ಷತನ ಪ್ರದರ್ಶಿಸಿದ ಬಗ್ಗೆ.

ಉ) ಬ್ಯಾಡಗಿ ನಗರದಲ್ಲಿ ಅಂಗಡಿ ಮುಗ್ಗಟ್ಟುಗಳನ್ನು ಸಹ ಬಂದ್ ಮಾಡಿಸದೆ ತೀವ್ರ ಕರ್ತವ್ಯಚ್ಯುತಿ ಪ್ರದರ್ಶಿಸಿದ ಬಗ್ಗೆ.

ಮೇಲ್ಕಂಡ ಆಪಾದನೆಗಳನ್ನೆಸಗಿ ನಿಮ್ಮ ಆಧ್ಯ ಕರ್ತವ್ಯದಲ್ಲಿ ತೀವ್ರ ಬೇಜವಾಬ್ದಾರಿತನ ಹಾಗೂ ಘೋರ ಕರ್ತವ್ಯ ನಿರ್ಲಕ್ಷತನ ಪ್ರದರ್ಶಿಸಿರುವಿರಿ ಎಂಬ ಆರೋಪ ಹೊರಿಸಿದೆ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಹಾವೇರಿ ಜಿಲ್ಲೆ ಇವರು ಮೇಲೆ ಕ್ರಮ ಸಂಖ್ಯೆ:(1) ರಲ್ಲಿ ಓದಲಾದ ದಿನಾಂಕ14–06–2005ರ ಆದೇಶದಲ್ಲಿ ಶ್ರೀ ಸತೀಶ್ ಎಸ್. ಪಾಟೀಲ್, ಪಿಎಸ್ಐ, ಬ್ಯಾಡಗಿ ರವರ ಮುಂಬರುವ ವಾರ್ಷಿಕ ವೇತನ ಬಡ್ತಿಯನ್ನು ನಂತರದ ವಾರ್ಷಿಕ ವೇತನ ಬಡ್ತಿಗಳಿಗೆ ಪರಿಣಾಮ ಬೀರುವಂತೆ ಮಾಡಿ ಆರು ತಿಂಗಳ ಕಾಲ ಮುಂದೂಡಲಾಗಿದೆ ಎಂದು ಆದೇಶಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಉತ್ತರ ವಲಯ ಬೆಳಗಾವಿ ಇವರು ಮೇಲೆ ಕ್ರಮ ಸಂಖ್ಯೆ:(2) ರಲ್ಲಿ ಓದಲಾದ ದಿನಾಂಕ: 05.05.2007 ರಲ್ಲಿ ಮೇಲ್ಮನವಿಗೆ ಹಿಂಬರಹ ನೀಡಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿ, ಆ.ಪೊ.ಅ ಯವರ ವಿರುದ್ಧ ಹೊರಿಸಿದ ಆರೋಪಗಳು ಭಾಗಶ: ಒಪ್ಪಬಹುದಾಗಿದ್ದು, ಪರಿಷ್ಕರಣ ಮೇಲ್ಮನವಿಯನ್ನು ಮುಂಬರುವ ವಾರ್ಷಿಕ ವೇತನ ಬಡ್ತಿಯನ್ನು ನಂತರದ ವಾರ್ಷಿಕ ವೇತನ ಬಡ್ತಿಗಳಿಗೆ ಪರಿಣಾಮ ಬೀರದಂತೆ 6 ತಿಂಗಳ ಕಾಲ ಮುಂದೂಡುವಂತೆ ಪುರಸ್ಕರಿಸಿ ಶಿಸ್ತು ಪ್ರಾಧಿಕಾರ ವಿಧಿಸಿದ ಆದೇಶವನ್ನು ಮಾರ್ಪಡಿಸಿ ಶಿಕ್ಷೆ ವಿಧಿಸಲು ಕರ್ನಾಟಕ ಲೋಕ ಸೇವಾ ಆಯೋಗದ ಅನಮೋದನೆಗಾಗಿ ಕೋರಲಾಗಿದ್ದು, ಆಯೋಗವು ದಿನಾಂಕ:24–01–2008ರ ತನ್ನ ಪತ್ರದಲ್ಲಿ ಸರ್ಕಾರದ ಪ್ರಸ್ತಾವನೆಗೆ ಸಹಮತಿಯನ್ನು ನೀಡಿದೆ. ಅದರಂತೆ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 73 ಪೊಸಿಅ 2007, ಬೆಂಗಳೂರು, ದಿ: 11ನೇ ಫೆಬ್ರವರಿ 2008**

ಪ್ರಸ್ತಾವನೆಯಲ್ಲಿ ವಿವರಿಸಲಾದ ಎಲ್ಲಾ ಅಂಶಗಳನ್ನು ಕೂಲಂಕುಷವಾಗಿ ಪರಿಶೀಲಿಸಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965/89 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಸತೀಶ್.ಎಸ್.ಪಾಟೀಲ್, ಪಿಎಸ್ಐ, ಬ್ಯಾಡಗಿ ಪೊಲೀಸ್ ಠಾಣೆ, ಬಾಗಲಕೋಟೆ ಜಿಲ್ಲೆ ಇವರ ಮುಂಬರುವ ಒಂದು ವಾರ್ಷಿಕ ವೇತನ ಬಡ್ತಿಯನ್ನು ನಂತರದ ವಾರ್ಷಿಕ ವೇತನದ ಬಡ್ತಿಗಳಿಗೆ ಪರಿಣಾಮ ಬೀರದಂತೆ 6 ತಿಂಗಳ ಕಾಲ ಮುಂದೂಡಲಾಗಿದೆ ಎಂದು ಆದೇಶಿಸಿದೆ.

ಆದೇಶವು ಶಿಸ್ತು ಪ್ರಾಧಿಕಾರ ಹೊರಡಿಸಿದ ಆದೇಶದ ದಿನಾಂಕದಿಂದಲೇ ಜಾರಿಗೆ ಬರುತ್ತದೆ.

ಈ ಆದೇಶವನ್ನು ಕರ್ನಾಟಕ ಲೋಕ ಸೇವಾ ಆಯೋಗದ ಪತ್ರದ ಸಂಖ್ಯೆ: ಪಿಎಸ್‌ಸಿ 81 ಸಿಎನ್‌ಎಸ್ 2007 ದಿನಾಂಕ: 24–01–2008 ರನ್ವಯ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ**

ಪಿ.ಆರ್. 312

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಬಿ.ಎನ್.ರಾಮಚಂದ್ರ, ಸಿಎಚ್‌ಸಿ–151, ಸಂಚಾರಿ ಪೊಲೀಸ್ ಠಾಣೆ, ಕೋಲಾರ ಜಿಲ್ಲೆ ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**

1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಕೋಲಾರ ಜಿಲ್ಲೆ ಕೋಲಾರ ಇವರ ಆದೇಶ ಸಂಖ್ಯೆ: ಡಿಇ.5:89 ದಿ:01–08–90 ಮತ್ತು ದಿನಾಂಕ: 01–02–2000.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ ಉಪ ಮಹಾನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು ಇವರ ಆದೇಶ ಸಂಖ್ಯೆ: ಅಪೀಲು/22/1996–97 ದಿನಾಂಕ: 17–10–1996 ಮತ್ತು ಅಪೀಲು/50/1999–2000 ದಿನಾಂಕ: 26–04–2000.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ:02–03–2006.
4. ಮಹಾ ನಿರ್ದೇಶಕರು ಮತ್ತು ಪೊಲೀಸ್ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)43/2006 ದಿನಾಂಕ: 18–10–2006.
5. ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ PSC 171 CNS 2007 dated: 30.01.2008

**ಪ್ರಸ್ತಾವನೆ:**

ಶ್ರೀ ಬಿ.ಎನ್.ರಾಮಚಂದ್ರ, ಸಿಎಚ್‌ಸಿ–151, ಸಂಚಾರಿ ಪೊಲೀಸ್ ಠಾಣೆ, ಕೋಲಾರ ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್(ಶಿಸ್ತು ನಿಯಮಗಳು) ನಿಯಮಾವಳಿ 1965/89 ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

ದೋಷರೋಪಣೆ:–

1) ಆರೋಪ–1: ಆರೋಪಿತ ಪೊಲೀಸ್ ಅಧಿಕಾರಿ ಶ್ರೀ ಬಿ.ಎನ್.ರಾಮಚಂದ್ರ, ಸಿಎಚ್‌ಸಿ–151, ಸಂಚಾರಿ ಪೊಲೀಸ್ ಠಾಣೆ, ಕೋಲಾರ ಆದ ನೀವು ಜವಾಬ್ದಾರಿಯುತ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು

ಅ) ಪೆರೇಸಂದ್ರ ಕ್ರಾಸ್ ಬಳಿಯಿರುವ ಪುಟ್ಟಮಾದಮ್ಮ ಕೋಂ ಶಿವಣ್ಣ ಎಂಬುವರ ಹೋಟೆಲ್‌ಗೆ ಹೋಗಿ ಹೆಣ್ಣು ಮಕ್ಕಳನ್ನು ಅಸಭ್ಯ ರೀತಿಯಿಂದ ವರ್ತಿಸಿರುವುದು.

ಆ) ಶ್ರೀಮತಿ ಕಮಲಮ್ಮ ರವರನ್ನು ಏಕವಚನದಿಂದ ಮಾತನಾಡಿಸಿ ಅವರು ಹಿಡಿದುಕೊಂಡು ಹೋಗುತ್ತಿದ್ದ ಹಸುವನ್ನು ಯಾವ ಕಾರಣವು ಇಲ್ಲದೆ ತಡೆದು ಆಕೆಯನ್ನು ಹೊಡೆದು ದುರ್ನಡತೆ ತೋರಿರುವುದು.

ಇ) ಕೃಷ್ಣಪ್ಪ ಬಿನ್ ಗುರುಮೂರ್ತಿ ಪೆರೇಸಂದ್ರ ಕ್ರಾಸ್ ರವರನ್ನು ಅಸಭ್ಯದಿಂದ ವರ್ತಿಸಿ ಅವರನ್ನು ವ್ಯಭಿಚಾರದ ವಿಚಾರದಲ್ಲಿ ಸಹಕರಿಸುವಂತೆ ಮನವಿ ಮಾಡಿಕೊಂಡು ದುರ್ನಡತೆ ತೋರಿಸಿರುವುದು.

ಈ) ಶ್ರೀ ಧರ್ಮಸಿಂಗ್ ಬಿನ್ ಸತ್ಯನಾರಾಯಣ ಪೆರೇಸಂದ್ರ ರವರ ಹೆಂಡತಿಯ ಜೊತೆಯಲ್ಲಿ ಅಸಭ್ಯ ರೀತಿಯಿಂದ ವರ್ತಿಸಿ ದುರ್ನಡತೆ ತೋರಿಸಿರುವುದು.

ಎಂಬ ಆರೋಪ ಹೊರಿಸಿದೆ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಕೋಲಾರ ಜಿಲ್ಲೆ ಇವರು ಮೇಲೆ ಕ್ರಮ ಸಂಖ್ಯೆ:(1) ರಲ್ಲಿ ಓದಲಾದ ದಿನಾಂಕ01–08–1990ರ ಆದೇಶದಲ್ಲಿ ಶ್ರೀ ಬಿ.ಎನ್.ರಾಮಚಂದ್ರ, ಸಿಎಚ್‌ಸಿ–151, ಸಂಚಾರಿ ಪೊಲೀಸ್ ಠಾಣೆ, ಕೋಲಾರ ರವರ ವೇತನದ ಎರಡು ಹಂತವನ್ನು ಮುಂದಿನ ವೇತನ ಬಡ್ತಿಗಳನ್ನು ಆಡಚಣೆಯಾಗುವಂತೆ ಒಂದು ವರ್ಷ ಕಾಲ ಕೆಳಗಿಳಿಸಿ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಿದೆ ಎಂದು ಆದೇಶಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ ಉಪ ಮಹಾನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ:(2) ರಲ್ಲಿ ಓದಲಾದ ದಿನಾಂಕ: 17–10–1996 ಮೇಲ್ಮನವಿಯನ್ನು ತಿರಸ್ಕರಿಸಿ ಆದೇಶಿಸಿರುತ್ತಾರೆ.

2) ಆರೋಪ–2: ಆರೋಪಿತ ಪೊಲೀಸ್ ಅಧಿಕಾರಿ ಶ್ರೀ ಬಿ.ಎನ್.ರಾಮಚಂದ್ರ, ಸಿಎಚ್‌ಸಿ–151, ಸಂಚಾರಿ ಪೊಲೀಸ್ ಠಾಣೆ, ಕೋಲಾರ ರವರು ಚಿಂತಾಮಣಿಪುರ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವಾಗ ದಿನಾಂಕ: 02–10–1997 ಮತ್ತು 03–10–1997 ರಂದು ಒಟ್ಟು 2 ದಿನಗಳ ಕಾಲ ಮೇಲಾಧಿಕಾರಿಗಳ ಆದೇಶವನ್ನು ಪಡೆಯದೆ, ರಜೆ ಅರ್ಜಿಯನ್ನು ಸಲ್ಲಿಸದೆ, ಅನಧಿಕೃತವಾಗಿ ಗೈರುಹಾಜರಾಗಿರುತ್ತಾರೆ. ಚಿಂತಾಮಣಿ ಪುರದಲ್ಲಿ ದಿನಾಂಕ: 02–03–97 ರಂದು ರಾತ್ರಿ 2–30 ಗಂಟೆ ಸಮಯದಲ್ಲಿ ಚಂದ್ರಶೇಖರ ಅಲಿಯಾಸ್ ಚಂದ್ರಶೇಖರ್ ಬಿನ್ ಮುನಿಯಪ್ಪ ಚಿಂತಾಮಣಿ ಪುರವಾಸಿ ಎಂಬುವನನ್ನು ಕಳವು ಮಾಲು ಸಮೇತ ಹಿಡಿದುಕೊಂಡು ದಸ್ತಗಿರಿ ಮಾಡಿ ಪೊಲೀಸ್ ಠಾಣೆಯಲ್ಲಿ ಇಟ್ಟಿದ್ದು, ಸದರಿ ಅಸಾಮಿ ದಿ:03–10–97 ರಂದು ಮಧ್ಯಾಹ್ನ 3–00 ಗಂಟೆ ಸಮಯದಲ್ಲಿ ಠಾಣೆಯಿಂದ ತಪ್ಪಿಸಿಕೊಂಡು ಹೋಗಿದ್ದು, ಬೆನ್ನಟ್ಟಿ ಹಿಡಿದುಕೊಂಡು ಬಂದು ವಿಚಾರ ಮಾಡಿದಾಗ ತನಗೆ, ಕೈಕೊಳ ಬೀಗದ ಕೈಯನ್ನು ರಾಮಚಂದ್ರ ಹೆಚ್‌ಸಿ–151 ರವರು ಕೊಟ್ಟು ಕೈಕೊಳವನ್ನು ಬಿಚ್ಚುಕೊಂಡು, ಹೊರಟುಹೋಗು, ಮೂರನೇ ದಿನ ಬಂಗಾರಪೇಟೆಯ ರಾಜೇಶ್‌ರವರ ಬ್ರಾಂಡಿ ಅಂಗಡಿಯ ಪಕ್ಕದಲ್ಲಿರುವ ಸೀನಪ್ಪನವರ ಅಂಗಡಿಯ ಬಳಿ ಬಂದು ನನ್ನ ವಿಳಾಸ ಕೇಳಿದರೆ ಹೇಳುತ್ತಾರೆ. ನನ್ನ ಬಳಿಗೆ ಬಾ ಬಂಗಾರಪೇಟೆಯಲ್ಲಿ ಒಂದು ಚಿನ್ನ ಬೆಳ್ಳಿ ಅಂಗಡಿ ಇದೆ ಕಳ್ಳತನ ಮಾಡಿ ಒಡವೆಗಳು ನನಗೆಕೊಡು, ನಗದು ಹಣ ನೀನು ತೆಗೆದುಕೋ ಎಂತ ಸಹಾಯ ಮಾಡಿದ ಮೇರೆಗೆ, ತಾನು ತಪ್ಪಿಸಿಕೊಂಡು ಹೋಗುತ್ತಿದ್ದುದಾಗಿ ನುಡಿದಿರುತ್ತಾರೆ. ಹೆಚ್‌ಸಿ–151 ಶ್ರೀ.ರಾಮಚಂದ್ರಪ್ಪ ರವರು ಆರೋಪಿ ಚಂದ್ರ ಅಲಿಯಾಸ್ ಚಂದ್ರಶೇಖರ್ ಎಂಬುವನನ್ನು ಪೊಲೀಸ್ ಠಾಣೆಯಲ್ಲಿ ಇಟ್ಟುಕೊಂಡಿದ್ದ ವಿಚಾರದಲ್ಲಿ ಇಲಾಖೆಯ ಮೇಲಾಧಿಕಾರಿಗಳನ್ನು ಕಂಡು ವಿಚಾರ ತಿಳಿಸಿ ಪರಿಹಾರ ಮಾಡಿಕೊಳ್ಳದೆ ವಕೀಲರನ್ನು ಕಂಡು ಪೊಲೀಸ್ ಇಲಾಖೆಯ ವಿಷಯಗಳನ್ನು ತಿಳಿಸಿ ವಕೀಲರ ಮುಖಾಂತರ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿ, ನೋಟಿಸ್ ನೀಡಿರುತ್ತಾರೆ. ಪೊಲೀಸ್ ಇಲಾಖೆಯ ಶಿಸ್ತಿನ ನೌಕರರಾದ ಹೆಚ್‌ಸಿ–151, ಶ್ರೀ.ರಾಮಚಂದ್ರಪ್ಪ ರವರು ತನ್ನ ಕರ್ತವ್ಯಕ್ಕೆ ಎರಡು ದಿನಗಳ ಕಾಲ ಅನಧಿಕೃತವಾಗಿ ಗೈರುಹಾಜರಾಗಿ, ಠಾಣೆಯಲ್ಲಿ ದಸ್ತಗಿರಿ ಮಾಡಿ ಇಟ್ಟಿದ್ದ ಆರೋಪಿಗೆ ಕೈಕೊಳದ ಬೀಗದ ಕೈನ್ನು ಕೊಟ್ಟು ತಪ್ಪಿಸಿಕೊಳ್ಳು ಪ್ರಚೋದನೆ ಮಾಡಿ ಕಳವು ಮಾಡಲು ಹಾಗೂ ಅದರಿಂದ ತನ್ನ ಸ್ವಂತಕ್ಕೆ ಲಾಭ ಪಡೆಯಲು ಪ್ರಯತ್ನಪಟ್ಟು, ಪೊಲೀಸ್ ಇಲಾಖೆಯ ವಿಚಾರವನ್ನು ವಕೀಲರಿಗೆ ತಿಳಿಸಿ, ನೇರವಾಗಿ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿಕೊಂಡು ಪೊಲೀಸ್ ಇಲಾಖೆಗೆ ನೋಟೀಸನ್ನು ನೀಡಿಸಿ, ತನ್ನ ಕರ್ತವ್ಯದಲ್ಲಿ ನಿರ್ಲಕ್ಷ್ಯತನದಿಂದ ಬೇಜವಾಬ್ದಾರಿತನದಿಂದ ನಡೆದುಕೊಂಡು ಅತೀವ ದುರ್ನಡತೆಯನ್ನು ವ್ಯಕ್ತಪಡಿಸಿರುವುದಾಗಿರುತ್ತದೆ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಕೋಲಾರ ಜಿಲ್ಲೆ ಇವರು ಮೇಲೆ ಕ್ರಮ ಸಂಖ್ಯೆ:(1) ರಲ್ಲಿ ಓದಲಾದ ದಿನಾಂಕ01–02–2000ರ ಆದೇಶದಲ್ಲಿ ಶ್ರೀ ಬಿ.ಎನ್.ರಾಮಚಂದ್ರ, ಸಿಎಚ್‌ಸಿ–151, ಸಂಚಾರಿ ಪೊಲೀಸ್ ಠಾಣೆ, ಕೋಲಾರ ರವರನ್ನು ಸೇವೆಯಿಂದ ವಜಾ ಮಾಡಲಾಗಿದೆ.

ಹಾಗೂ ಇವರ ಗೈರುಹಾಜರಿ ಅವಧಿ ದಿನಾಂಕ:02–10–1997 ಮತ್ತು 03–10–1997 ಎರಡು ದಿನಗಳನ್ನು ಸಂಬಳ ರಹಿತ ರಜೆಯನ್ನಾಗಿ ಪರಿಗಣಿಸಿದೆ ಎಂದು ಆದೇಶಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ ಉಪ ಮಹಾನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು ಇವರು ಶಿಸ್ತು ಪ್ರಾಧಿಕಾರದ ಶಿಕ್ಷೆಯ ಗಂಭೀರತೆಯನ್ನು ಪುನರ್ ಪರಿಶೀಲಿಸಿ ಆದೇಶವನ್ನು ಮಾನವೀಯತೆ ದೃಷ್ಟಿಯಿಂದ ಈ ಕೆಳಗಿನಂತೆ ಮಾರ್ಪಡು ಮಾಡಿರುತ್ತಾರೆ.

ಅ) ಅಪೀಲುದಾರರನ್ನು ಪುನ: ಸೇವೆಗೆ ತೆಗೆದುಕೊಳ್ಳಲಾಗಿದೆ.

ಆ) ಇವರ ವೇತನವನ್ನು ಹೆಚ್‌ಸಿ ಹುದ್ದೆಯ ಮೂಲ ವೇತನದ ಕನಿಷ್ಟ ಮಟ್ಟಕ್ಕೆ ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ದಕ್ಕೆಯಾಗುವಂತೆ 3 ವರ್ಷ ಕಾಲ ಇಳಿಸಲಾಗಿದೆ.

ಇ) ಸದರಿಯವರು ಸೇವೆಯಿಂದ ಹೊರಗುಳಿದ ಅವಧಿಯನ್ನು ಸಂಬಳ ರಹಿತ ರಜೆಯನ್ನಾಗಿ ಪರಿಗಣಿಸಲಾಗಿದೆ.

ಈ) ಸದರಿಯವರ ಅನಧೀಕೃತ ಗೈರು ಹಾಜರಿ ಅವಧಿಯನ್ನು ಸಂಬಳ ರಹಿತ ರಜೆಯೆಂದೇ ಪರಿಗಣಿಸಲಾಗಿದೆ.

ಉ) ಸದರಿ ಆದೇಶವು ಅಪೀಲುದಾರರಿಗೆ ಜಾರಿಯಾದ ದಿನದಿಂದ ಜಾರಿಗೆ ಬರುತ್ತದೆ. ಮತ್ತು ಸದರಿಯವರು ಹಿಂದಿನ ಯಾವುದೇ ರೀತಿಯ ಲಾಭವನ್ನು ಪಡೆಯಲು ಅರ್ಹರಾಗಿರುವುದಿಲ್ಲ

ಮೇಲೆ ಕ್ರಮ ಸಂಖ್ಯೆ:(2) ರಲ್ಲಿ ಓದಲಾದ ದಿನಾಂಕ: 26–04–2000ರಲ್ಲಿ ಮಾರ್ಪಾಡಿಸಿ ಆದೇಶಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿ, ಆ.ಪೊ.ಅ ಯವರ ವಿರುದ್ಧ ಹೊರಿಸಿದ ಆರೋಪ–1 ಮತ್ತು 2 ಭಾಗಶ: ಪುರಸ್ಕರಿಸಿ ಶಿಸ್ತು ಪ್ರಾಧಿಕಾರ ವಿಧಿಸಿದ ಆದೇಶವನ್ನು ಭಾಗಶ: ಮಾರ್ಪಡಿಸಿ ಶಿಕ್ಷೆ ವಿಧಿಸಲು ಕರ್ನಾಟಕ ಲೋಕ ಸೇವಾ ಆಯೋಗದ ಅನುಮೋದನೆಗಾಗಿ ಕೋರಲಾಗಿದ್ದು, ಆಯೋಗವು ದಿನಾಂಕ:30–01–2008ರ ತನ್ನ ಪತ್ರದಲ್ಲಿ ಸರ್ಕಾರದ ಪ್ರಸ್ತಾವನೆಗೆ ಸಹಮತಿಯನ್ನು ನೀಡಿದೆ. ಅದರಂತೆ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 203 ಪೊಸಿಅ 2007, ಬೆಂಗಳೂರು, ದಿ: 12ನೇ ಫೆಬ್ರವರಿ 2008**

ಪ್ರಸ್ತಾವನೆಯಲ್ಲಿ ವಿವರಿಸಲಾದ ಎಲ್ಲಾ ಅಂಶಗಳನ್ನು ಕೂಲಂಕುಷವಾಗಿ ಪರಿಶೀಲಿಸಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965/89 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಬಿ.ಎನ್.ರಾಮಚಂದ್ರ, ಸಿಎಚ್‌ಸಿ–151, ಸಂಚಾರಿ ಪೊಲೀಸ್ ಠಾಣೆ, ಕೋಲಾರ ಇವರ ಆರೋಪ–1ಕ್ಕೆ ಎರಡು ವಾರ್ಷಿಕ ವೇತನ ಬಡ್ತಿಯನ್ನು ಎರಡು ವರ್ಷಗಳ ಕಾಲ ಮುಂದಿನ ವಾರ್ಷಿಕ ವೇತನಕ್ಕೆ ಧಕ್ಕೆಯಾಗದಂತೆ ಮುಂದೂಡಲು ಹಾಗೂ ಆರೋಪ–2ಕ್ಕೆ ವಾರ್ಷಿಕ ವೇತನ ಬಡ್ತಿಯನ್ನು ಒಂದು ವರ್ಷಗಳ ಕಾಲ ತಡೆಹಿಡಿದು ಭವಿಷ್ಯವರ್ತಿಗೆ ಪರಿಣಾಮ ಬೀರುವಂತೆ ದಂಡನೆ ವಿಧಿಸಿ ಮತ್ತು ಸೇವೆಯಿಂದ ಹೊರಗುಳಿದ ಗೈರುಹಾಜರಾದ ಅವಧಿಯನ್ನು ಅವರ ಹಕ್ಕಿನಲ್ಲಿರುವ ರಜೆಯೆಂದು ಪರಿಗಣಿಸುವಂತೆ ಆದೇಶಿಸಿದೆ.

ಆದೇಶವು ಶಿಸ್ತು ಪ್ರಾಧಿಕಾರ ಹೊರಡಿಸಿದ ಆದೇಶದ ದಿನಾಂಕದಿಂದಲೇ ಜಾರಿಗೆ ಬರುತ್ತದೆ.

ಈ ಆದೇಶವನ್ನು ಕರ್ನಾಟಕ ಲೋಕ ಸೇವಾ ಆಯೋಗದ ಪತ್ರದ ಸಂಖ್ಯೆ: ಪಿಎಸ್‌ಸಿ 171 ಸಿಎನ್‌ಎಸ್ 2007 ದಿನಾಂಕ: 30–01–2008 ರನ್ವಯ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ**

ಪಿ.ಆರ್. 310

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಎಂ.ಬಿ.ನಂಜಪ್ಪ, ಹೆಚ್‌ಸಿ ಚಾಲಕ–94, 3ನೇ ಪಡೆ, ಕೆಎಸ್‌ಆರ್‌ಪಿ ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**

1. ಶಿಸ್ತು ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ಕೆ.ಎಸ್.ಆರ್.ಪಿ, ಬೆಂಗಳೂರು ಇವರ ಆದೇಶ ಸಂಖ್ಯೆ: ಡಿಇ/41/2001–02 ದಿನಾಂಕ: 04–09–2004.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಡಿ.ಜಿ ಮತ್ತು ಐ.ಜಿ.ಪಿ ಬೆಂಗಳೂರು ಇವರ ಹಿಂಬರಹ ಸಂಖ್ಯೆ: ಅಪೀಲು(6)/8/2006 ದಿನಾಂಕ: 22–03–2005.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ:04–10–2007.
4. ಮಹಾ ನಿರ್ದೇಶಕರು ಮತ್ತು ಪೊಲೀಸ್ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರಸಂಖ್ಯೆ: ಅಪೀಲು(2)/92/2007–08 ದಿನಾಂಕ: 20–12–2007.

**ಪ್ರಸ್ತಾವನೆ:**

ಶ್ರೀ ಎಂ.ಬಿ.ನಂಜಪ್ಪ, ಹೆಚ್‌ಸಿ ಚಾಲಕ–94, 3ನೇ ಪಡೆ, ಕೆಎಸ್‌ಆರ್‌ಪಿ, ಬೆಂಗಳೂರು ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್(ಶಿಸ್ತು ನಿಯಮಗಳು) ನಿಯಮಾವಳಿ 1965/89 ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:–** 1) ಶ್ರೀ ಎಂ.ಬಿ.ನಂಜಪ್ಪ, ಹೆಚ್.ಸಿ ಚಾಲಕ–94, 3ನೇ ಪಡೆ, ಕೆ.ಎಸ್.ಆರ್.ಪಿ, ಬೆಂಗಳೂರು ರವರು ದಿನಾಂಕ:07–09–2001 ರಂದು ವಾಹನ ಸಂಖ್ಯೆ: ಕೆಎ–01–ಜಿ–8388ರ ಚಾಲಕರಾಗಿದ್ದು, ಅಂದು ನೀವು 1ನೇ ಪಡೆ, ಕೆ.ಎಸ್.ಆರ್.ಪಿ ನಿಯಂತ್ರಣ ಕೊಠಡಿಯಿಂದ ಆರ್.ಎಸ್.ಐ ಶ್ರೀ ಸಿ.ಸಿ.ಭೀಮಯ್ಯನವರ ನೇತೃತ್ವದ ತುಕಡಿಯನ್ನು ಊಟಕ್ಕಾಗಿ ಕೋರಮಂಗಲದ ಕೆ.ಎಸ್.ಆರ್.ಪಿ ವಸತಿಗೃಹದ ಸಮುಚ್ಚಯಕ್ಕೆ ಕರೆದೊಯ್ಯುತ್ತಿರುವಾಗ ಸಮಯ ಸುಮಾರು 13.00 ಗಂಟೆಯಲ್ಲಿ ಸದರಿ ವಾಹನವನ್ನು ಅತಿ ವೇಗ ಹಾಗೂ ಆಜಾಗರೂಕತೆಯಿಂದ ಚಲಿಸಿ ಸ್ಕೂಟರ್ ಸಂಖ್ಯೆ: ಕೆಎ–02–ಹೆಚ್–3883 ವಾಹನಕ್ಕೆ ಢಿಕ್ಕಿ ಹೊಡೆಸಿ ಸದರಿ ಸ್ಕೂಟರನಲ್ಲಿ ಚಲಿಸುತ್ತಿದ್ದ ಪಿ.ಶ್ರೀನಿವಾಸರಾವ್ ಎಂಬುವವರು ಸ್ಥಳದಲ್ಲಿ ನಿಧನರಾಗಲು ಹಾಗೂ ಸ್ಕೂಟರ್ ಹಿಂದಿನ ಸವಾರ ಶ್ರೀ ಚನ್ನಕೇಶವ ಎನ್ನುವವರಿಗೆ ಸಣ್ಣ ಪುಟ್ಟ ಪ್ರಮಾಣದ ಗಾಯಗಳಾಗಲು ಕಾರಣರಾಗಿರುವುದು, ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷ್ಯತೆ ಮತ್ತು ಬೇಜವಾಬ್ದಾರಿ ಪ್ರದರ್ಶಿಸಿರುತ್ತೀರಿ ಎಂದು ಆರೋಪ ಹೊರಿಸಲಾಗಿದೆ.

2) ಶ್ರೀ ಎಂ.ಬಿ.ನಂಜಪ್ಪ, ಹೆಚ್.ಸಿ ಚಾಲಕ–94, 3ನೇ ಪಡೆ, ಕೆ.ಎಸ್.ಆರ್.ಪಿ, ಬೆಂಗಳೂರು ರವರು ಅತಿ ವೇಗದಿಂದ ವಾಹನವನ್ನು ಚಲಿಸಿ ಶ್ರೀ ಶ್ರೀನಿವಾಸರಾವ್ ರವರ ಸಾವಿಗೆ ಹಾಗೂ ಶ್ರೀ ಚನ್ನಕೇಶವ ಎಂಬುವವರಿಗೆ ಸಣ್ಣ ಪುಟ್ಟ ಗಾಯಗಳಾಗಲು ಹಾಗೂ ಸ್ಕೂಟರ್ ಸಂಖ್ಯೆ:ಕೆಎ–02–ಹೆಚ್–3883 ವಾಹನಕ್ಕೆ ಜಖಂ ಆಗಲು ಕಾರಣರಾದ ಪ್ರಯುಕ್ತ ನಿಮ್ಮ ವಿರುದ್ಧ ಆಲಸೂರು ಪೊಲೀಸ್ ಠಾಣೆಯಲ್ಲಿ ಅಪರಾಧ ಮೊಕದ್ದಮೆ 564/2001 ಕಲಂ ಐಪಿಸಿ 279, 307 ಹಾಗೂ 304ಎ ಅನ್ವಯ ದಾಖಲಾದ ಪ್ರಕರಣದಲ್ಲಿ ಭಾಗಿಯಾಗಿ ಕರ್ತವ್ಯದಲ್ಲಿ ನಿರ್ಲಕ್ಷತನ ಮತ್ತು ದುರ್ನಡತೆಯನ್ನು ಪ್ರದರ್ಶಿಸಿರುವುದು ಗಂಭೀರವಾದ ಆರೋಪ.

3) ಶ್ರೀ ಸಿ.ಸಿ.ಭೀಮಯ್ಯ, ಸ್ಪೆಷಲ್ ಆರ್.ಎಸ್.ಐ, 3ನೇ ಪಡೆ, ಕೆ.ಎಸ್.ಆರ್.ಪಿ, ನಿಮ್ಮ ನೇತೃತ್ವದಲ್ಲಿ 1 ತುಕಡಿ ಇ–1 ತುಕಡಿಯ ಸಿಬ್ಬಂದಿ ವರ್ಗದವರನ್ನು ದಿನಾಂಕ: 07–09–2001 ರಂದು ವಾಹನ ಸಂಖ್ಯೆ: ಕೆಎ–01–ಜಿ–8388ರ ವಾಹನ ಚಾಲಕ ಶ್ರೀ ಎಂ.ಬಿ.ನಂಜಪ್ಪ, ರವರೊಂದಿಗೆ ನಿಲುಗಡೆ ಕರ್ತವ್ಯದ ಪ್ರಯುಕ್ತ ಕೆ.ಎಸ್.ಆರ್.ಪಿ ಕಂಟ್ರೋಲ್ ರೂಂ ಅಧಿಕಾರಿಯವರ ನಿಯಂತ್ರಣಕ್ಕೆ ಕಳುಹಿಸಿಕೊಡಲಾಗಿತ್ತು. ಸದರಿ ವಾಹನವನ್ನು ಅತಿ ವೇಗ ಮತ್ತು ಅಜಾಗರೂಕತೆಯಿಂದ ವಾಹನವನ್ನು ಚಲಿಸಲು ಅವಕಾಶ ನೀಡಿದ್ದು ಪ್ರಯುಕ್ತ ಐ.ಟಿ.ಸಿ ವೃತ್ತದಲ್ಲಿ ಚಲಿಸುತ್ತಿರುವ ಸ್ಕೂಟರ್ ಢಿಕ್ಕಿ ಹೊಡೆದ ಪರಿಣಾಮ ಶ್ರೀ ಶ್ರೀನಿವಾಸರಾವ್ ಸ್ಥಳದಲ್ಲಿ ಸಾವನ್ನಪ್ಪಲು ಹಾಗೂ ಮತ್ತೊಬ್ಬ ಸವಾರನಿಗೆ ಗಾಯಗಳಾಗಲು ಅವಕಾಶ ಮಾಡಿಕೊಟ್ಟು ಕರ್ತವ್ಯದಲ್ಲಿ ಅತಿ ನಿರ್ಲಕ್ಷತನ, ಚಾಲಕನ ಮೇಲೆ ನಿಯಂತ್ರಣ ಸಾಧಿಸಲು ವಿಫಲರಾಗಿರುವ ಆರೋಪ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಸಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೆಎಸ್‌ಆರ್‌ಪಿ, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ:(1) ರಲ್ಲಿ ಓದಲಾದ ದಿನಾಂಕ:4–09–2004ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು 4 ವರ್ಷಗಳ ಕಾಲ ಮುಂದಿನ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ಹಾಗೂ ಅಮಾನತ್ತಿನ ಅವಧಿಯನ್ನು ಅಮಾನತ್ತೇಂದೇ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಡಿ.ಜಿ ಮತ್ತು ಐ.ಜಿ.ಪಿ ಇವರು ಮೇಲ್ಮನವಿಯನ್ನು 157 ದಿನಗಳ ನಂತರ ವಿಳಂಭವಾಗಿ ಸಲ್ಲಿಸಿರುವುದರಿಂದ ಮೇಲೆ ಕ್ರಮ ಸಂಖ್ಯೆ:(2) ರಲ್ಲಿ ಓದಲಾದ ದಿನಾಂಕ:22–03–2005 ರಲ್ಲಿ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಇಲಾಖಾ ವಿಚಾರಣೆಯಲ್ಲಿ ಇವರ ವಿರುದ್ಧ ಹೊರಿಸಲಾದ ಆರೋಪಗಳು ಸಾಬೀತಾಗಿವೆ, "ಅಪಘಾತವಾದ ರಸ್ತೆಯಲ್ಲಿ ವಾಹನ ಸಂಚಾರ ಮತ್ತು ಜನ ಸಂಚಾರ ದಟ್ಟಣೆಯಾಗಿದ್ದು, ಇಂತಹ ಸ್ಥಳದಲ್ಲಿ ವಾಹನ ಚಾಲನೆ ಮಾಡುವಾಗ ಚಾಲಕನು ಸೂಚನೆ ನೀಡಿ, ವಾಹನವನ್ನು ನಿಧಾನವಾಗಿ ಅಕ್ಕಪಕ್ಕದ ಕನ್ನಡಿಯಲ್ಲಿ ನೋಡಿಕೊಂಡು ಯಾರು ಹಿಂದೆ ಮತ್ತು ಎಡಬಲ ಬದಿಯಲ್ಲಿ ಬರುವುದಿಲ್ಲವೆಂದು ಖಾತರಿ ಮಾಡಿಕೊಂಡು ಆದಷ್ಟು ನಿಧಾನವಾಗಿ ವಾಹನವನ್ನು ತಿರುವಿನಲ್ಲಿ ಚಾಲನೆ ಮಾಡಬೇಕು. ಆದರೆ ಇವರು ಹಾಗೆ ಮಾಡದೇ ಏಕಾಏಕಿ ವಾಹನವನ್ನು ತಿರುವಿನಲ್ಲಿ ಅತೀ ವೇಗವಾಗಿ ತಿರುಗಿಸಿ ಸ್ಕೂಟರ್ ಸಂಖ್ಯೆ: ಕೆಎ–02–ಹೆಚ್–3883ರ ಚಾಲಕನ ಸಾವಿಗೆ ಮತ್ತು ಹಿಂದಿನ ಸವಾರರಿಗೆ ರಕ್ತ ಗಾಯವಾಗಲು ಕಾರಣವಾಗುವ ಮೂಲಕ ತಪ್ಪಿತಸ್ಥರಾಗಿರುತ್ತಾರೆ". ಇದನ್ನು ಪರಿಗಣಿಸುವಾಗ ಅರ್ಜಿದಾರರ ಅಜಾಗರೂಕತೆಯಿಂದ ಅಪಘಾತ ಸಂಭವಿಸಿರುವುದು ಸ್ಪಷ್ಟವಾಗಿದ್ದು ಸ್ಕೂಟರ್ ಸವಾರನು ಮೃತಪಟ್ಟಿರುತ್ತಾರೆ. ಇದಕ್ಕೆ ಹೋಲಿಸಿದಲ್ಲಿ ಇವರಿಗೆ ವಿಧಿಸಿದ ಶಿಕ್ಷೆಯು ಕಡಿಮೆ ಪ್ರಮಾಣದ್ದಾಗಿರುತ್ತದೆ. ಇದನ್ನು ಪುನರ್ ಪರಿಶೀಲಿಸಲು ಯಾವುದೇ ದೃಢಪಡುವ ಅಂಶಗಳಿಲ್ಲದಿರುವುದರಿಂದ ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು ಬೇಜವಾಬ್ದಾರಿತನ, ನಿರ್ಲಕ್ಷತೆ ಪ್ರದರ್ಶಿಸಿರುವುದು ಸ್ಪಷ್ಟವಾಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯ ಕಂಡು ಬರುವುದಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 10 ಪೊಸಿಅ 2008, ಬೆಂಗಳೂರು, ದಿ: 6ನೇ ಫೆಬ್ರವರಿ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965/89 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಂ.ಬಿ.ನಂಜಪ್ಪ, ಹೆಚ್‌ಸಿ ಚಾಲಕ–94, 3ನೇ ಪಡೆ, ಕೆಎಸ್‌ಆರ್‌ಪಿ, ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ**

ಪಿ.ಆರ್. 257

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ವೈ.ಕೆ.ಕಾಶಪ್ಪನವರ್, ಆರ್‌ಎಸ್‌ಡಿ, ಡಿಎಆರ್, ಮಂಡ್ಯ ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**

1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಸೂಪರಿಂಟೆಂಡೆಂಟ್, ಮಂಡ್ಯ ಜಿಲ್ಲೆ ಇವರ ಆದೇಶ ಸಂಖ್ಯೆ: ಸಿಬ್ಬಂದಿ/2/ಪಿಅರ್/37/06–07 ದಿನಾಂಕ: 18–01–2007.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು ಇವರ ಆದೇಶ ಸಂಖ್ಯೆ: ಅಪೀಲು/35/2006–07 ದಿನಾಂಕ: 26–06–2007.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ:11–07–2007.
4. ಮಹಾ ನಿರ್ದೇಶಕರು ಮತ್ತು ಪೊಲೀಸ್ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)41/2007–08 ದಿನಾಂಕ: 07–09–2007.
5. ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ PSC 203 CNS 2007 dated: 25.01.2008.

**ಪ್ರಸ್ತಾವನೆ:**

ಶ್ರೀ ವೈ.ಕೆ.ಕಾಶಪ್ಪನವರ್, ಆರ್‌ಎಸ್‌ಡಿ, ಡಿಎಆರ್, ಮಂಡ್ಯ ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್(ಶಿಸ್ತು ನಿಯಮಗಳು) ನಿಯಮಾವಳಿ 1965/89 ನಿಯಮ 7 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:–**

1) ಆರೋಪಿತ ಪೊಲೀಸ್ ಅಧಿಕಾರಿ ಶ್ರೀ ವೈ.ಕೆ.ಕಾಶಪ್ಪನವರ್, ಆರ್‌ಎಸ್‌ಡಿ, ಡಿಎಆರ್, ಮಂಡ್ಯ ಇವರು ದಿನಾಂಕ:22–11–2006 ರಂದು ಮಾನ್ಯ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ದಕ್ಷಿಣ ವಲಯ, ಮೈಸೂರು ರವರು ಸಶಸ್ತ್ರ ಮೀಸಲು ಪಡೆ, ಮಂಡ್ಯದಲ್ಲಿ ಇಲಾಖಾ ವಾಹನ ತಪಾಸಣೆ ಮಾಡುವ ಮಾಹಿತಿ ನಿಮಗೆ ಈ ಮೊದಲೆ ತಿಳಿದಿದ್ದರೂ ಕೂಡ ವಾಹನಗಳನ್ನು ಶುಚಿಯಾಗಿ ಹಾಗೂ ಉತ್ತಮ ಸ್ಥಿತಿಯಲ್ಲಿ ಇರುವ ಬಗ್ಗೆ ಕ್ರಮ ಕೈಗೊಳ್ಳದೆ ಇದ್ದರಿಂದ ಮಾನ್ಯ ಐ.ಜಿ.ಪಿ ರವರು ಅಂದು ವಾಹನ ತಪಾಸಣೆ ಮಾಡುವಾಗ ಈ ಮೇಲಿನ ನ್ಯೂನತೆಗಳ ಬಗ್ಗೆ ರಿಮಾರ್ಕ್ಸ್ ಮಾಡಿರುತ್ತಾರೆ. ಹೀಗೆ ನೀವು ಎಂ.ಟಿ.ಓ ಕರ್ತವ್ಯ ನಿರ್ವಹಿಸುವಲ್ಲಿ ಅತೀವ ಬೇಜವಾಬ್ದಾರಿ, ನಿರ್ಲಕ್ಷತೆ ಮತ್ತು ಅಶಿಸ್ತು ತೋರಿರುವ ಬಗ್ಗೆ ಆರೋಪ ಹೊರಿಸಿದೆ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಸೂಪರಿಂಟೆಂಡೆಂಟ್, ಮಂಡ್ಯ ಇವರು ಮೇಲೆ ಕ್ರಮ ಸಂಖ್ಯೆ:(1) ರಲ್ಲಿ ಓದಲಾದ ದಿನಾಂಕ:18–01–2007ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ನಂತರದ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ಆರು(6) ತಿಂಗಳ ಕಾಲ ಮುಂದೂಡಲಾಗಿದೆ ಎಂದು ಆದೇಶಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು ಇವರು ಮೇಲೆ ಕ್ರಮ ಸಂಖ್ಯೆ:(2) ರಲ್ಲಿ ಓದಲಾದ ದಿನಾಂಕ: 26–06–2007 ರಲ್ಲಿ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿ, ಇವರಿಗೆ ವಿಧಿಸಿರುವ ಶಿಕ್ಷೆಯು ಹೆಚ್ಚಿನ ಪ್ರಮಾಣದ ಶಿಕ್ಷೆಯಾಗಿದ್ದು, ಆದ್ದರಿಂದ ಅರ್ಜಿದಾರರ ಪರಿಷ್ಕರಣ ಮೇಲ್ಮನವಿಯನ್ನು ಪುರಸ್ಕರಿಸಿ ಶಿಸ್ತು ಪ್ರಾಧಿಕಾರದ ಆದೇಶವನ್ನು ರದ್ದುಪಡಿಸಿ 'ಏಚ್ಚರಿಕೆ' ನೀಡುವ ಬಗ್ಗೆ ಕರ್ನಾಟಕ ಲೋಕ ಸೇವಾ ಆಯೋಗದ ಅನುಮೋದನೆಗಾಗಿ ಕೋರಲಾಗಿದ್ದು, ಆಯೋಗವು ದಿನಾಂಕ:25–01–2008ರ ತನ್ನ ಪತ್ರದಲ್ಲಿ ಸರ್ಕಾರದ ಪ್ರಸ್ತಾವನೆಗೆ ಸಹಮತಿಯನ್ನು ನೀಡಿದೆ. ಅದರಂತೆ ಈ ಕೆಳಕಂಡಂತೆ ಆದೇಶಿಸಿದೆ.

ಸರ್ಕಾರದ ಆದೇಶ ಸಂಖ್ಯೆ: ಒಇ 278 ಪೊಸಿಅ 2007, ಬೆಂಗಳೂರು ದಿ: 6ನೇ ಫೆಬ್ರವರಿ 2008

ಪ್ರಸ್ತಾವನೆಯಲ್ಲಿ ವಿವರಿಸಲಾದ ಎಲ್ಲಾ ಅಂಶಗಳನ್ನು ಕೂಲಂಕುಷವಾಗಿ ಪರಿಶೀಲಿಸಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965/89 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ವೈ.ಕೆ.ಕಾಶಪ್ಪನವರ್, ಆರ್‌ಎಸ್‌ಡಿ, ಡಿಎಆರ್, ಇವರಿಗೆ ಶಿಸ್ತು ಪ್ರಾಧಿಕಾರ ವಿಧಿಸಿದ ಆದೇಶವನ್ನು ಮಾರ್ಪಡಿಸಿ "ಎಚ್ಚರಿಕೆ" ನೀಡಿ ಆದೇಶಿಸಿದೆ.

ಈ ಆದೇಶವು ಶಿಸ್ತು ಪ್ರಾಧಿಕಾರ ಹೊರಡಿಸಿದ ಆದೇಶದ ದಿನಾಂಕದಿಂದಲೇ ಜಾರಿಗೆ ಬರುತ್ತದೆ.

ಈ ಆದೇಶವನ್ನು ಕರ್ನಾಟಕ ಲೋಕ ಸೇವಾ ಆಯೋಗದ ಪತ್ರದ ಸಂಖ್ಯೆ: ಪಿಎಸ್‌ಸಿ 203 ಸಿಎನ್‌ಎಸ್ 2007 ದಿನಾಂಕ: 25–01–2008 ರನ್ವಯ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ಎ. ಕುಲಕರ್ಣಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. 258

**ವಿಷಯ:** ಶ್ರೀ ಜಿ.ಮುನಿಯಲ್ಲಪ್ಪ, ಎ.ಎಸ್.ಐ, ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಡೆಪ್ಯೂಟಿ ಪೊಲೀಸ್ ಕಮೀಷನರ್, ಉತ್ತರ ವಲಯ, ಬೆಂಗಳೂರು ಇವರ ಆದೇಶ ಸಂಖ್ಯೆ: 5/ಡಿಇ/ಆರ್–6/ಡಿಸಿಪಿ/ಉ/2004 ದಿನಾಂಕ: 02–05–2006.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಪರ ಪೊಲೀಸ್ ಕಮೀಷನರ್, ಆಡಳಿತ, ಬೆಂಗಳೂರು ಇವರ ಆದೇಶ ಸಂಖ್ಯೆ: ಅಪೀಲು/52/2006 ದಿನಾಂಕ: 05–05–2007.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ:28–05–2007.
4. ಮಹಾ ನಿರ್ದೇಶಕರು ಮತ್ತು ಪೊಲೀಸ್ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)27/2007–08 ದಿನಾಂಕ: 13–08–2007.
5. ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ PSC 191 CNS 2007 dated: 29.01.2008

**ಪ್ರಸ್ತಾವನೆ:**

ಶ್ರೀ ಜಿ.ಮುನಿಯಲ್ಲಪ್ಪ, ಎ.ಎಸ್.ಐ, ಬೆಂಗಳೂರು ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್(ಶಿಸ್ತು ನಿಯಮಗಳು) ನಿಯಮಾವಳಿ 1965/89 ನಿಯಮ 8 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:–**

1) ಆರೋಪಿತ ಪೊಲೀಸ್ ಅಧಿಕಾರಿ ಶ್ರೀ ಜಿ.ಮುನಿಯಲ್ಲಪ್ಪ, ಎ.ಎಸ್.ಐ, ಬೆಂಗಳೂರು ಇವರು ನೀವು ರಾಜಾಜಿನಗರ ಪೊಲೀಸ್ ಠಾಣೆಯಲ್ಲಿ ಎಎಸ್‌ಐ ಆಗಿ ಕರ್ತವ್ಯ ನಿರ್ವಹಿಸುತ್ತಿದ್ದು, ನೀವು ಶ್ರೀಮತಿ ಭಾಗ್ಯಲಕ್ಷ್ಮಿ, 30 ವರ್ಷ ಎಂಬಾಕೆಯನ್ನು ನಂಬಿಸಿ, ಆಕೆಯೊಂದಿಗೆ ಅಕ್ರಮ ಸಂಬಂಧ ಬೆಳೆಸಿ ಆಕೆ ಗರ್ಭಿಣೆಯಾದಾಗ ಮಗುವನ್ನು ತೆಗೆಸಿ ಹಾಕಲು ಪ್ರಯತ್ನಿಸಿದ್ದು, ಫಲಕಾರಿಯಾಗದಿದ್ದುದರಿಂದ ನಿಮಗೆ ಈಗಾಗಲೇ ಮದುವೆಯಾಗಿ ಪತ್ನಿ ಮಕ್ಕಳನ್ನು ಹೊಂದಿದ್ದರು ಸಹ ದಿನಾಂಕ:12.05.2004 ರಂದು ಆಕೆಯನ್ನು ದೇವಸ್ಥಾನದಲ್ಲಿ ಮದುವೆಯಾಗಿ ನಂತರ ಆಕೆಗೆ ಜನಿಸಿದ ಹೆಣ್ಣು ಮಗುವನ್ನು ಬಲವಂತವಾಗಿ ಅಪಹರಣ ಮಾಡಿದ್ದಕ್ಕಾಗಿ ಈ ಬಗ್ಗೆ ಶ್ರೀಮತಿ ಭಾಗಲಕ್ಷ್ಮಿ ರವರು ರಾಜಾಜಿನಗರ ಪೊಲೀಸ್ ಠಾಣೆಯಲ್ಲಿ ದೂರು ನೀಡಿದನ್ವಯ ಮೊ.ಸಂಖ್ಯೆ:140/04, ಕಲಂ 494, 363, ರೆ.ವಿ.34 ಐಪಿಸಿ ರೀತ್ಯಾ ಪ್ರಕರಣ ದಾಖಲಾತಿರುತ್ತದೆ. ತನಿಖಾವಧಿಯಲ್ಲಿ ಸದರಿ ಮಗು ಶ್ರೀಮತಿ ಲಕ್ಷ್ಮಿ ಎಂಬಕೆಯ ಬಳಿ ಇದ್ದುದ್ದಾಗಿ ಮಾಹಿತಿ ತಿಳಿದು ಬಂದ ಮೇರೆಗೆ ನ್ಯಾಯಾಧೀಶರ ಸಮಕ್ಷಮ ಮಗುವನ್ನು ಶ್ರೀಮತಿ ಭಾಗ್ಯಲಕ್ಷ್ಮಿ ಯವರ ವಶಕ್ಕೆ ನೀಡಲಾಗಿರುತ್ತದೆ. ನೀವು ಒಬ್ಬ ಜವಾಬ್ದಾರಿಯುತ ಪೊಲೀಸ್ ಅಧಿಕಾರಿಯಾಗಿದ್ದು, ಸಾರ್ವಜನಿಕರ ಮಾನ, ಆಸ್ತಿ, ಪ್ರಾಣ ಕಾಪಾಡಬೇಕಾಗಿದ್ದರೂ ನೀವು ಒಂದು ಹೆಂಗಸನ್ನು ಈ ರೀತಿ ನಡೆಸಿಕೊಂಡು ಅನೈತಿಕ ಕೃತ್ಯಕ್ಕೆ ಕೈ ಹಾಕಿದ್ದಲ್ಲದೆ ಆಕೆಗೆ ಜನಿಸಿದ ಮಗುವನ್ನು ಸಹ ಅಪಹರಿಸಿರುವುದು ಘೋರ ಅಪರಾಧವಾಗಿದ್ದು, ಇದು ನಿಮ್ಮ ಅತೀವ ದುರ್ನಡತೆ ತೋರಿಸಿದ್ದಲ್ಲದೆ ಶಿಸ್ತು ಪೊಲೀಸ್ ಅಧಿಕಾರಿಗೆ ತರವಲ್ಲದ ರೀತಿಯಲ್ಲಿ ವರ್ತಿಸಿರುತ್ತೀರಿ ಎಂಬ ಆರೋಪ ಹೊರಿಸಿದೆ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ಶಿಸ್ತು ಪ್ರಾಧಿಕಾರಿ ಹಾಗೂ ಡೆಪ್ಯೂಟಿ ಪೊಲೀಸ್ ಕಮೀಷನರ್, ಉತ್ತರ ವಿಭಾಗ, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ:(1) ರಲ್ಲಿ ಓದಲಾದ ದಿನಾಂಕ02–05–2006ರ ಆದೇಶದಲ್ಲಿ ಶ್ರೀ ಮುನಿಯಪ್ಪ, ಎ.ಎಸ್.ಐ, ರಾಜಾಜಿನಗರ ಪೊಲೀಸ್ ಠಾಣೆ (ಹಾಲಿ ಅಮಾನತ್ತು) ಬೆಂಗಳೂರು ನಗರ

ರವರನ್ನು ಸೇವೆಯಿಂದ ವಜಾ ಮಾಡಲಾಗಿದೆ. ಸದರಿಯವರು ಅಮಾನತ್ತಿನಲ್ಲಿ ಕಳೆದ ಅವಧಿ ದಿನಾಂಕ 13–08–2004 ರಿಂದ 02–05–2006 ರವರೆಗೆ ಅಮಾನತ್ತು ಎಂದೇ ಪರಿಗಣಿಸಲಾಗಿದೆ ಎಂದು ಆದೇಶಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಪರ ಪೊಲೀಸ್ ಕಮೀಷನರ್, ಆಡಳಿತ, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ:(2) ರಲ್ಲಿ ಓದಲಾದ ದಿನಾಂಕ: 05.05.2007 ರಲ್ಲಿ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿ, ಆ.ಪೊ.ಅ ಯವರ ವಿರುದ್ಧ ಹೊರಿಸಿದ ಆರೋಪಗಳು ಗಂಭೀರ ಸ್ವರೂಪದ್ದಾಗಿದ್ದು, ಸಾಬೀತಾಗಿರುವುದರಿಂದ ಇವರನ್ನು ಸೇವೆಯಿಂದ ವಜಾ ಮಾಡಲಾಗಿದೆ. ಆ.ಪೊ.ಅ ರವರ ಜನ್ಮ ದಿನಾಂಕವು 03–01–1950 ಆಗಿದ್ದು ಇವರು ಸೇವೆಯಲ್ಲಿ ಮುಂದುವರೆದಿದ್ದಲ್ಲಿ ಜನವರಿ 2008 ರಲ್ಲಿ ನಿವೃತರಾಗಿರುತ್ತಿದ್ದರು. ಆದ್ದರಿಂದ ಮಾನವೀಯತೆಯ ದೃಷ್ಟಿಯಿಂದ ಪರಿಗಣಿಸಿ ಶಿಸ್ತು ಪ್ರಾಧಿಕಾರ ವಿಧಿಸಿದ 'ಸೇವೆಯಿಂದ ವಜಾ' ಆದೇಶವನ್ನು ಮಾರ್ಪಡಿಸಿ "ಕಡ್ಡಾಯ ನಿವೃತ್ತಿ" ಶಿಕ್ಷೆ ವಿಧಿಸಲು ಕರ್ನಾಟಕ ಲೋಕ ಸೇವಾ ಆಯೋಗದ ಅನುಮೋದನೆಗಾಗಿ ಕೋರಲಾಗಿದ್ದು, ಆಯೋಗವು ದಿನಾಂಕ:29–01–2008ರ ತನ್ನ ಪತ್ರದಲ್ಲಿ ಸರ್ಕಾರದ ಪ್ರಸ್ತಾವನೆಗೆ ಸಹಮತಿಯನ್ನು ನೀಡಿದೆ. ಅದರಂತೆ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 279 ಪೊಸಿಅ 2007, ಬೆಂಗಳೂರು ದಿ: 6ನೇ ಫೆಬ್ರವರಿ 2008**

ಪ್ರಸ್ತಾವನೆಯಲ್ಲಿ ವಿವರಿಸಲಾದ ಎಲ್ಲಾ ಅಂಶಗಳನ್ನು ಕೂಲಂಕುಷವಾಗಿ ಪರಿಶೀಲಿಸಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965/89 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಜಿ.ಮುನಿಯಲ್ಲಪ್ಪ, ಎ.ಎಸ್.ಐ, ಬೆಂಗಳೂರು ಇವರಿಗೆ 'ಸೇವೆಯಿಂದ ವಜಾ' ಶಿಕ್ಷೆಯನ್ನು ಮಾರ್ಪಡಿಸಿ "ಕಡ್ಡಾಯ ನಿವೃತ್ತಿ" ಹಾಗೂ ಅಮಾನತ್ತಿನಲ್ಲಿದ ಅವಧಿಯನ್ನು ಅಮಾನತ್ತೆಂದೇ ಆದೇಶಿಸಿದೆ.

ಈ ಆದೇಶವು ಶಿಸ್ತು ಪ್ರಾಧಿಕಾರ ಹೊರಡಿಸಿದ ಆದೇಶದ ದಿನಾಂಕದಿಂದಲೇ ಜಾರಿಗೆ ಬರುತ್ತದೆ.

ಈ ಆದೇಶವನ್ನು ಕರ್ನಾಟಕ ಲೋಕ ಸೇವಾ ಆಯೋಗದ ಪತ್ರದ ಸಂಖ್ಯೆ: ಪಿಎಸ್‌ಸಿ 191 ಸಿಎನ್‌ಎಸ್ 2007 ದಿನಾಂಕ: 29–01–2008 ರನ್ವಯ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ಎ. ಕುಲಕರ್ಣಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. 259

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಆಯುಷ್ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ಖಾಸಗಿ 05 ಅನುದಾನಿತ ಆಯುರ್ವೇದ ವೈದ್ಯಕೀಯ ಮಹಾವಿದ್ಯಾಲಯ ಮತ್ತು ಆಸ್ಪತ್ರೆಗಳ ಬೋಧಕೇತರ ಸಿಬ್ಬಂದಿಗಳಿಗೆ 2007 ರ ಕರ್ನಾಟಕ ನಾಗರಿಕ ಸೇವಾ (ಪರಿಷ್ಕೃತ ವೇತನ) ನಿಯಮಾವಳಿಗಳನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ:ಎಫ್‌ಡಿ 08 ಎಸ್‌ಆರ್‌ಪಿ 2007, ದಿನಾಂಕ:16-05-2007.
2. ನಿರ್ದೇಶಕರು, ಆಯುಷ್ ನಿರ್ದೇಶನಾಲಯ ಇವರ ಪತ್ರ ಸಂಖ್ಯೆ:ಆಯುಷ್/20/ಸಿಬ್ಬಂದಿ (5)/2007-08, ದಿನಾಂಕ:03-07-2007.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರ.ಸಂ. (1) ರ ಆದೇಶದಲ್ಲಿ, ಸರ್ಕಾರವು 5 ನೇ ವೇತನ ಆಯೋಗದ ಶಿಫಾರಸ್ಸುಗಳನ್ನು ಒಪ್ಪಿ ಸರ್ಕಾರಿ ನೌಕರರಿಗೆ ಪರಿಷ್ಕೃತ ವೇತನ ಶ್ರೇಣಿಯನ್ನು ಮಂಜೂರು ಮಾಡಿದೆ.

ನಿರ್ದೇಶಕರು, ಆಯುಷ್ ನಿರ್ದೇಶನಾಲಯ, ಬೆಂಗಳೂರು ಇವರು ಮೇಲೆ ಓದಲಾದ ಕ್ರ.ಸಂ. (2) ರ ಪತ್ರದಲ್ಲಿ, ಇಲಾಖೆಯ ಅಧೀನದಲ್ಲಿ ಕಾರ್ಯನಿರ್ವಹಿಸುತ್ತಿರುವ 05 ಖಾಸಗಿ ಅನುದಾನಿತ ಆಯುರ್ವೇದ ವೈದ್ಯಕೀಯ ಮಹಾವಿದ್ಯಾಲಯ ಮತ್ತು ಆಸ್ಪತ್ರೆಗಳ ಬೋಧಕೇತರ ಸಿಬ್ಬಂದಿಗಳಿಗೆ ಉಲ್ಲೇಖ (1) ರ ಆದೇಶದ ಪ್ರಕಾರ ಪರಿಷ್ಕೃತ ವೇತನ ಶ್ರೇಣಿಯನ್ನು ವಿಸ್ತರಿಸಲು ಮಂಜೂರಾತಿಯನ್ನು ನೀಡಬೇಕೆಂದು ಕೋರಿದ್ದಾರೆ.

ಸರ್ಕಾರವು ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ:ಆಕುಕ 276 ಪಿಟಿಡಿ 2007, ಬೆಂಗಳೂರು, ದಿನಾಂಕ:31ನೇ ಜನವರಿ 2008**

ಪ್ರಸ್ತಾವನೆಯಲ್ಲಿ ಹೇಳಲಾದ ಅಂಶಗಳನ್ನು ಪರಿಗಣಿಸಿ, ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ (ಆಯುಷ್) ಇಲಾಖೆಯ ನಿಯಂತ್ರಣದಲ್ಲಿರುವ ಈ ಕೆಳಗಿನ 05 ಅನುದಾನಿತ ಆಯುರ್ವೇದ ವೈದ್ಯಕೀಯ ಮಹಾವಿದ್ಯಾಲಯ ಮತ್ತು ಅದಕ್ಕೆ ಹೊಂದಿಕೊಂಡ ಆಸ್ಪತ್ರೆಗಳ ಬೋಧಕೇತರ ಸಿಬ್ಬಂದಿಗಳಿಗೆ ಮೇಲೆ ಓದಲಾದ ಕ್ರ.ಸಂ. (1) ರ ದಿನಾಂಕ: 16.05.2007 ರ ಆದೇಶದನ್ವಯ ಪರಿಷ್ಕೃತ ವೇತನ ಶ್ರೇಣಿಗಳನ್ನು ದಿನಾಂಕ:01-07-2005 ರಿಂದ ಅನ್ವಯವಾಗುವಂತೆ ವಿಸ್ತರಿಸಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

1) ಶ್ರೀ ಡಿ.ಜಿ.ಎಂ. ಆಯುರ್ವೇದ ವೈದ್ಯಕೀಯ ಮಹಾವಿದ್ಯಾಲಯ ಮತ್ತು ಆಸ್ಪತ್ರೆ, ಗದಗ.
2) ಶ್ರೀ ಬಿ.ಎಂ.ಕೆ. ಆಯುರ್ವೇದ ವೈದ್ಯಕೀಯ ಮಹಾವಿದ್ಯಾಲಯ ಮತ್ತು ಆಸ್ಪತ್ರೆ, ಬೆಳಗಾಂ.
3) ಎಸ್.ಡಿ.ಎಂ. ಆಯುರ್ವೇದ ವೈದ್ಯಕೀಯ ಮಹಾವಿದ್ಯಾಲಯ ಮತ್ತು ಆಸ್ಪತ್ರೆ, ಉಡುಪಿ.
4) ಆಯುರ್ವೇದ ವೈದ್ಯಕೀಯ ಮಹಾವಿದ್ಯಾಲಯ ಮತ್ತು ಆಸ್ಪತ್ರೆ, ಬಿಜಾಪುರ.
5) ಆಯುರ್ವೇದ ಮಹಾವಿದ್ಯಾಲಯ ಮತ್ತು ಆಸ್ಪತ್ರೆ, ಹುಬ್ಬಳ್ಳಿ.

ಕರ್ನಾಟಕ ನಾಗರಿಕ ಸೇವಾ (ಪರಿಷ್ಕೃತ ವೇತನ) ನಿಯಮಗಳು, 2007 ರಲ್ಲಿ ವಿಧಿಸುವ ಷರತ್ತುಗಳನ್ನು ಈ ಮೇಲಿನ ಆಯುರ್ವೇದ ವೈದ್ಯಕೀಯ ಮಹಾವಿದ್ಯಾಲಯ ಮತ್ತು ಆಸ್ಪತ್ರೆಗಳು ಪಾಲಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ:ಆಇ/2121/ವೆಚ್ಚ-5/2007, ದಿನಾಂಕ:09.01.2008 ರ ಸಹಮತಿಯೊಂದಿಗೆ ಹೊರಡಿಸಿದೆ.

ಭಾರತದ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಮಹಾಲಕ್ಷ್ಮಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 277

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

(ಭಾರತೀಯ ವೈದ್ಯ ಪದ್ಧತಿ)

**ವಿಷಯ:** ಗುತ್ತಿಗೆ ಉಪನ್ಯಾಸಕರ ಸೇವೆಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ ಸಂಖ್ಯೆ:ಆಕುಕ 23 ಪಿಟಿಡಿ 2007, ದಿನಾಂಕ:13-03-2007.
2. ನಿರ್ದೇಶಕರು, ಆಯುಷ್ ನಿರ್ದೇಶನಾಲಯ, ಬೆಂಗಳೂರು ಇವರ ಪತ್ರ ದಿನಾಂಕ: 26.11.2007.
3. ಪ್ರಾಚಾರ್ಯರು, ಸರ್ಕಾರಿ ಯುನಾನಿ ವೈದ್ಯಕೀಯ ಮಹಾ ವಿದ್ಯಾಲಯ, ಬೆಂಗಳೂರು ರವರ ಪತ್ರ ದಿನಾಂಕ:30-10-2007

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ:(1) ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯಲ್ಲಿ, ಹೋಮಿಯೋಪತಿ, ಯುನಾನಿ ಮತ್ತು ಪ್ರಕೃತಿ ಚಿಕಿತ್ಸೆ ಹಾಗೂ ಯೋಗ ಮಹಾವಿದ್ಯಾಲಯ, ಬೆಂಗಳೂರು ಮತ್ತು ಮೈಸೂರು ಇಲ್ಲಿ ಖಾಲಿ ಇರುವ ಉಪನ್ಯಾಸಕರುಗಳ (ಹೋಮಿಯೋಪತಿ), (ಯುನಾನಿ ಮತ್ತು ಪ್ರಕೃತಿ ಚಿಕಿತ್ಸೆ) (ಹಾಗೂ ಯೋಗ) ಹುದ್ದೆಗಳಿಗೆ ರೂ. 7990/- ರ ಮಾಸಿಕ ಸಂಚಿತ ವೇತನವನ್ನು ನಿಗದಿಪಡಿಸಿ, 11 ತಿಂಗಳ ಅವಧಿಗೆ ಕೆಲವು ಷರತ್ತು ಮತ್ತು ನಿಬಂಧನೆ ಗೊಳಪಟ್ಟು ಗುತ್ತಿಗೆ ಆಧಾರದ ಮೇಲೆ ನೇಮಕ ಮಾಡಲಾಗಿದೆ.

ಮೇಲೆ ಕ್ರಮ ಸಂಖ್ಯೆ:(2) ರಲ್ಲಿ ಓದಲಾದ ನಿರ್ದೇಶಕರ ಪತ್ರದಲ್ಲಿ, ಪ್ರಾಚಾರ್ಯರು, ಸರ್ಕಾರಿ ಯುನಾನಿ ವೈದ್ಯಕೀಯ ಮಹಾವಿದ್ಯಾಲಯ, ಬೆಂಗಳೂರು ರವರು ಮೇಲೆ ಕ್ರಮ ಸಂಖ್ಯೆ:(3) ರಲ್ಲಿ ಓದಲಾದ ಪತ್ರದಲ್ಲಿ, ಈ ಹಿಂದೆ ನೇಮಕಗೊಂಡಿದ್ದ ಗುತ್ತಿಗೆ ಉಪನ್ಯಾಸಕರುಗಳ ಅವಧಿಯು ಫೆಬ್ರವರಿ-2008 ಕ್ಕೆ ಮುಕ್ತಾಯವಾಗುವುದರಿಂದ, ಪುನ: 11 ತಿಂಗಳ ಅವಧಿಗೆ ಮುಂದುವರೆಸುವಂತೆ ಕೋರಿರುತ್ತಾರೆ. ಅದರಂತೆ, ಕೆಳಕಂಡ ಗುತ್ತಿಗೆ ಉಪನ್ಯಾಸಕರುಗಳ ಗುತ್ತಿಗೆ ಅವಧಿಯನ್ನು ಫೆಬ್ರವರಿ-2008 ರ ನಂತರ (ಅಂದರೆ, ಅವರ ಗುತ್ತಿಗೆ ಅವಧಿಯು ಮುಗಿದ ದಿನಾಂಕದ ನಂತರ) ಪುನ: 11 ತಿಂಗಳ ಅವಧಿಗೆ ಅಥವಾ ಕರ್ನಾಟಕ ಲೋಕಸೇವಾ ಆಯೋಗದಿಂದ ಭರ್ತಿ ಮಾಡುವವರೆಗೆ ಅಥವಾ ನಿಯಮಾನುಸಾರ ಹುದ್ದೆಗಳನ್ನು ಭರ್ತಿ

ಮಾಡುವವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಸರ್ಕಾರದ ಅಧಿಸೂಚನೆ ದಿನಾಂಕ:13-03-2007 ರ ಅನುಬಂಧದಲ್ಲಿ ನಮೂದಿಸಿರುವ ಷರತ್ತು ಮತ್ತು ನಿಬಂಧನೆಗೊಳಪಟ್ಟು ಮುಂದುವರೆಸುವಂತೆ ಕೋರಿರುತ್ತಾರೆ.

| ಕ್ರ.ಸಂ. | ಹೆಸರು | 11 ತಿಂಗಳು ಗುತ್ತಿಗೆ ಮುಕ್ತಾಯ ಗೊಂಡ ದಿನಾಂಕ |
|---|---|---|
| **ಸರ್ಕಾರಿ ಯುನಾನಿ ವೈದ್ಯಕೀಯ ಮಹಾವಿದ್ಯಾಲಯ, ಬೆಂಗಳೂರು** | | |
| 1 | ಡಾ:ಅಮೀನಾ ಯಾಸ್ಮಿನ್ | 19-02-2008 |
| 2 | ಡಾ:ಆಯಿಷಾ ಅಂಜುಂ ಎ. | 16-02-2008 |
| 3 | ಡಾ:ಮಹಮದ್ ಹನೀಫ್ ಹನಮಸಾಗರ್ | 16-02-2008 |
| 4 | ಡಾ:ಆಯಿಷಾ ತಬಸುಮ್ | 16-02-2008 |
| 5 | ಡಾ:ನವೀದಾ ತಬಸುಮ್ | 19-02-2008 |
| 6 | ಡಾ:ಸುಮಾ ನಾಗರಾಜ್ | 20-02-2008 |

ಸರ್ಕಾರವು ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ:ಆಕುಕ 398 ಪಿಟಿಡಿ 2007, ಬೆಂಗಳೂರು, ದಿನಾಂಕ: 07ನೇ ಫೆಬ್ರವರಿ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಸರ್ಕಾರಿ ಯುನಾನಿ ವೈದ್ಯಕೀಯ ಮಹಾವಿದ್ಯಾಲಯ, ಬೆಂಗಳೂರು ಇಲ್ಲಿ ಕೆಲಸ ನಿರ್ವಹಿಸುತ್ತಿರುವ ಪ್ರಸ್ತಾವನೆಯಲ್ಲಿ ತಿಳಿಸಿರುವ ಗುತ್ತಿಗೆ ಉಪನ್ಯಾಸಕರುಗಳು 11 ತಿಂಗಳ ಅವಧಿಯ ಸೇವೆಯನ್ನು ಪೂರ್ಣಗೊಳಿಸಿದ ನಂತರ ಎರಡು ದಿನ ಮೊಟಕುಗೊಳಿಸುವ ಷರತ್ತಿಗೆ ಒಳಪಟ್ಟು (ಹಿಂಬರಹ ನೀಡುವುದು) ನಂತರ ಅವರುಗಳ ಸೇವೆಯನ್ನು ಮುಂದಿನ ದಿನಾಂಕದಿಂದ ಪುನ: 11 ತಿಂಗಳ ಅವಧಿಗೆ ಅಥವಾ ಕರ್ನಾಟಕ ಲೋಕಸೇವಾ ಆಯೋಗದಿಂದ ಭರ್ತಿ ಮಾಡುವವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಸರ್ಕಾರದ ಆದೇಶ ಸಂಖ್ಯೆ:ಆಕುಕ 23 ಪಿಟಿಡಿ 2007, ದಿನಾಂಕ: 13-03-2007 ರಲ್ಲಿ ನಮೂದಿಸಿರುವ ಷರತ್ತು ಮತ್ತು ನಿಬಂಧನೆಗೊಳಪಟ್ಟು 2008-09 ನೇ ಸಾಲಿನ ಆಯವ್ಯಯದಲ್ಲಿ ಅನುದಾನವನ್ನು ಒದಗಿಸಿಕೊಳ್ಳುವ ಷರತ್ತಿಗೊಳಪಟ್ಟು ಮುಂದುವರೆಸಲಾಗಿದೆ.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ:ಆಕುಕ 1375 ಆಂಆಸ 2008, ದಿನಾಂಕ: 08.01.2008 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

ಭಾರತದ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಮಹಾಲಕ್ಷ್ಮಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 278

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

(ಭಾರತೀಯ ವೈದ್ಯ ಪದ್ಧತಿ)

**ವಿಷಯ:** ಭಾರತ ಸರ್ಕಾರವು ಜಿಲ್ಲಾ ಆಸ್ಪತ್ರೆಗಳಲ್ಲಿ ಆಯುಷ್ ವಿಭಾಗಗಳನ್ನು ತೆರೆಯಲು ಮಂಜೂರು ಮಾಡಿರುವ ಸಹಾಯಾನುದಾನವನ್ನು ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**

1. ಭಾರತ ಸರ್ಕಾರದ ಪತ್ರ ಸಂಖ್ಯೆ:ಆರ್-14030/02/2006- ಹೆಚ್ ಅಂಡ್ ಡಿ ಸೆಲ್, ದಿನಾಂಕ:18-12-2006.
2. ಆರ್ಥಿಕ ಇಲಾಖೆಯ ಬಿಲ್ ದೃಢೀಕರಣ ಪತ್ರ:ಆಇ/43/ಎಫ್‌ಆರ್‌ಸಿ/2007, ದಿನಾಂಕ: 23-01-2007
3. ನಿರ್ದೇಶಕರು, ಆಯುಷ್ ನಿರ್ದೇಶನಾಲಯ, ಬೆಂಗಳೂರು ಇವರ ಪತ್ರ ಸಂಖ್ಯೆ:ಆಯುಷ್/ 10/ಬಿಯುಡಿ(1)/2007-08, ದಿನಾಂಕ:10-05-2007.
4. ಸರ್ಕಾರದ ಆದೇಶ ಸಂಖ್ಯೆ:ಆಕುಕ 89 ಪಿಐಎಂ 2007, ದಿನಾಂಕ:29-03-2007.
5. ಸರ್ಕಾರದ ಆದೇಶ ಸಂಖ್ಯೆ:ಆಕುಕ 144 ಪಿಐಎಂ 2007, ದಿನಾಂಕ:29-03-2007.

ಪ್ರಸ್ತಾವನೆ:

ಮೇಲೆ ಕ್ರ.ಸಂ. (1) ರಲ್ಲಿ ಓದಲಾದ ಭಾರತ ಸರ್ಕಾರದ ಪತ್ರದಲ್ಲಿ, 8 ಜಿಲ್ಲಾ ಆಸ್ಪತ್ರೆಗಳಲ್ಲಿ ಆಯುಷ್ ವಿಭಾಗಗಳನ್ನು ಪ್ರಾರಂಭಿಸಲು ಒಟ್ಟು ರೂ. 248.85 ಲಕ್ಷಗಳನ್ನು ಕೆಳಗಿನಂತೆ ಮಂಜೂರು ಮಾಡಿದೆ.

| ಕ್ರ. ಸಂ. | ಸಂಸ್ಥೆಯ ಹೆಸರು | ರೂ. ಲಕ್ಷಗಳಲ್ಲಿ |
|---|---|---|
| 1 | ಜಿಲ್ಲಾ ಆಸ್ಪತ್ರೆ, ಗುಲ್ಬರ್ಗಾ. | 29.85 |
| 2 | ಜಿಲ್ಲಾ ಆಸ್ಪತ್ರೆ, ಧಾರವಾಡ. | 35.00 |
| 3 | ಜಿಲ್ಲಾ ಆಸ್ಪತ್ರೆ, ದಾವಣಗೆರೆ. | 35.00 |
| 4 | ಜಿಲ್ಲಾ ಆಸ್ಪತ್ರೆ, ರಾಯಚೂರು. | 35.00 |
| 5 | ಜಿಲ್ಲಾ ಆಸ್ಪತ್ರೆ, ಹಾಸನ. | 25.00 |
| 6 | ಜಿಲ್ಲಾ ಆಸ್ಪತ್ರೆ, ಕೋಲಾರ. | 33.00 |
| 7 | ಜಿಲ್ಲಾ ಆಸ್ಪತ್ರೆ, ಚಿತ್ರದುರ್ಗ. | 28.00 |
| 8 | ಜಿಲ್ಲಾ ಆಸ್ಪತ್ರೆ, ಚಿಕ್ಕಮಗಳೂರು. | 28.00 |
| | **ಒಟ್ಟು** | **248.85** |

ಮೇಲೆ ಕ್ರ.ಸಂ. (2) ರಲ್ಲಿ ಓದಲಾದ ಆರ್ಥಿಕ ಇಲಾಖೆಯ ಜಮಾ ದೃಢೀಕರಣ ಪತ್ರದಲ್ಲಿ ಈ ಹಣವು ರಾಜ್ಯ ಸರ್ಕಾರಕ್ಕೆ ಹೊಂದಾಣಿಕೆಯಾಗಿರುವುದನ್ನು ದೃಢೀಕರಿಸಲಾಗಿದೆ.

ಮೇಲೆ ಕ್ರ.ಸಂ. (3) ರಲ್ಲಿ ಓದಲಾದ ನಿರ್ದೇಶಕರ ಪತ್ರದಲ್ಲಿ, 2006-07 ನೇ ಸಾಲಿನ ವರ್ಷಾಂತ್ಯದಲ್ಲಿ ಮೇಲಿನ ಆದೇಶವು ಸ್ವೀಕೃತವಾಗಿದ್ದು, ಈ ಅನುದಾನವನ್ನು ಬಿಡುಗಡೆ ಮಾಡಲು ಲೆಕ್ಕ ಶೀರ್ಷಿಕೆ 2210-05-200-0-11 ಯೋಜನೆ ಸವಿವರ ಲೆಕ್ಕ ಶೀರ್ಷಿಕೆ 101 ಸಹಾಯಾನುದಾನ ಅಡಿಯಲ್ಲಿ ಪೂರ್ಣ ಹಣ ಲಭ್ಯವಿಲ್ಲದ ಕಾರಣ ಮೇಲೆ ಹೇಳಲಾದ ಜಿಲ್ಲಾ ಆಸ್ಪತ್ರೆಗಳ ಪೈಕಿ ಕ್ರ.ಸಂ. 1 ರಿಂದ 4 ರವರೆಗಿನ ಆಸ್ಪತ್ರೆಗಳಿಗೆ ರೂ. 134.85 ಲಕ್ಷಗಳನ್ನು ಸರ್ಕಾರವು ಮೇಲೆ ಕ್ರ.ಸಂ. (4) ಮತ್ತು (5) ರಲ್ಲಿ ಓದಲಾದ ಸರ್ಕಾರದ ಆದೇಶಗಳಲ್ಲಿ ಬಿಡುಗಡೆ ಮಾಡಲಾಗಿದೆ.

2007-08 ರ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ 2210-05-200-0-11 ಯೋಜನೆ ಸವಿವರ ಲೆಕ್ಕ ಶೀರ್ಷಿಕೆ 101 ಸಹಾಯಾನುದಾನದ ಅಡಿಯಲ್ಲಿ ರೂ. 200.00 ಲಕ್ಷಗಳನ್ನು ಒದಗಿಸಲಾಗಿದ್ದು, ಇದರಲ್ಲಿ ಈವರೆಗೆ ಯಾವುದೇ ಹಣ ವೆಚ್ಚ ವಾಗದಿರುವುದರಿಂದ ಸದರಿ ಲೆಕ್ಕ ಶೀರ್ಷಿಕೆಯಡಿ ರೂ. 114.00 ಲಕ್ಷಗಳನ್ನು ಈ ಕೆಳಕಂಡ ಜಿಲ್ಲಾ ಆಸ್ಪತ್ರೆಗಳಿಗೆ ಬಿಡುಗಡೆ ಮಾಡುವಂತೆ ಹಾಗೂ ಇದನ್ನು ವಿಶೇಷ ಪ್ರಕರಣವೆಂದು ಪರಿಗಣಿಸಿ ಲೇಖಾನುದಾನವತಿಯಿಂದ ವಿನಾಯಿತಿ ನೀಡುವಂತೆ ಕೋರಿರುತ್ತಾರೆ.

| | | |
|---|---|---|
| 1 | ಜಿಲ್ಲಾ ಆಸ್ಪತ್ರೆ, ಹಾಸನ. | 25.00 ಲಕ್ಷ |
| 2 | ಜಿಲ್ಲಾ ಆಸ್ಪತ್ರೆ, ಕೋಲಾರ. | 33.00 ಲಕ್ಷ |
| 3 | ಜಿಲ್ಲಾ ಆಸ್ಪತ್ರೆ, ಚಿತ್ರದುರ್ಗ. | 28.00 ಲಕ್ಷ |
| 4 | ಜಿಲ್ಲಾ ಆಸ್ಪತ್ರೆ, ಚಿಕ್ಕಮಗಳೂರು. | 28.00 ಲಕ್ಷ |
| | **ಒಟ್ಟು** | **114.00 ಲಕ್ಷಗಳು** |

ಸದರಿ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ:ಆಕುಕ 77 ಪಿಐಎಂ 2008, ಬೆಂಗಳೂರು, ದಿನಾಂಕ:01ನೇ ಫೆಬ್ರವರಿ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಭಾರತ ಸರ್ಕಾರವು ಜಿಲ್ಲಾ ಸಾರ್ವಜನಿಕ ಆಸ್ಪತ್ರೆಗಳಲ್ಲಿ ಆಯುಷ್ ವಿಭಾಗಗಳನ್ನು ತೆರೆಯಲು ಮಂಜೂರು ಮಾಡಿರುವ ಸಹಾಯಾನುದಾನವನ್ನು ಬಿಡುಗಡೆ ಮಾಡಲು ಸಾಧ್ಯವಾಗಲಿಲ್ಲವಾದ್ದರಿಂದ, ಅನುಬಂಧದಲ್ಲಿರುವ ಕೇಂದ್ರ ಸರ್ಕಾರವು ಹೊರಡಿಸಿರುವ ಮಾರ್ಗಸೂಚಿಯನ್ವಯ ಹಾಗೂ ಸದರಿ ವಿಭಾಗಗಳಿಗೆ ರಾಜ್ಯ ಸರ್ಕಾರದ ಯೋಜನೆಯಡಿಯಲ್ಲಿ ಅನುದಾನ ಒದಗಿಸಿಕೊಂಡ ಅಥವಾ ಎನ್‌ಆರ್‌ಹೆಚ್‌ಎಂ ಅಡಿಯಲ್ಲಿ ಪಿಐಪಿ (Programme Implementation Plan) ವ್ಯವಸ್ಥೆ ಮಾಡಿಕೊಳ್ಳುವ ಅಥವಾ ಹಾಲಿ ಇರುವ ಹುದ್ದೆಗಳನ್ನು ರೀ-ಡಿಪ್ಲಾಯ್‌ಮೆಂಟ್ ಮುಖಾಂತರ ಮಾನವ ಶಕ್ತಿ (ಸಿಬ್ಬಂದಿ ಸೇವೆ) ಯನ್ನು ಒದಗಿಸುವ ಷರತ್ತಿಗೆ ಒಳಪಟ್ಟು ಈ ಕೆಳಕಂಡಂತೆ ರೂ. 114.00 ಲಕ್ಷಗಳ (ಒಂದು ನೂರ ಹದಿನಾಲ್ಕು ಲಕ್ಷ ರೂಪಾಯಿಗಳು ಮಾತ್ರ) ಅನುದಾನವನ್ನು ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿ ನೀಡಿದೆ.

| | | | |
|---|---|---|---|
| 1 | ಜಿಲ್ಲಾ ಆಸ್ಪತ್ರೆ, ಹಾಸನ. | 25.00 ಲಕ್ಷ | (ಇಪ್ಪತ್ತೈದು ಲಕ್ಷ ರೂಪಾಯಿಗಳು ಮಾತ್ರ) |
| 2 | ಜಿಲ್ಲಾ ಆಸ್ಪತ್ರೆ, ಕೋಲಾರ. | 33.00 ಲಕ್ಷ | (ಮೂವತ್ತ ಮೂರು ಲಕ್ಷ ರೂಪಾಯಿಗಳು ಮಾತ್ರ) |
| 3 | ಜಿಲ್ಲಾ ಆಸ್ಪತ್ರೆ, ಚಿತ್ರದುರ್ಗ. | 28.00 ಲಕ್ಷ | (ಇಪ್ಪತ್ತೆಂಟು ಲಕ್ಷ ರೂಪಾಯಿಗಳು ಮಾತ್ರ) |
| 4 | ಜಿಲ್ಲಾ ಆಸ್ಪತ್ರೆ, ಚಿಕ್ಕಮಗಳೂರು. | 28.00 ಲಕ್ಷ | (ಇಪ್ಪತ್ತೆಂಟು ಲಕ್ಷ ರೂಪಾಯಿಗಳು ಮಾತ್ರ) |
| | **ಒಟ್ಟು** | **114.00 ಲಕ್ಷಗಳು** | **(ಒಂದು ನೂರ ಹದಿನಾಲ್ಕು ಲಕ್ಷ ರೂಪಾಯಿಗಳು ಮಾತ್ರ)** |

ಈ ಅನುದಾನವನ್ನು ಲೆಕ್ಕ ಶೀರ್ಷಿಕೆ 2210-05-200-0-11 ಯೋಜನೆ ಸವಿವರ ಲೆಕ್ಕ ಶೀರ್ಷಿಕೆ 101 ಸಹಾಯಾನುದಾನದಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ 09 ಟಿಎಫ್‌ಪಿ 2004, ದಿನಾಂಕ:17-08-2004 ರಲ್ಲಿ ಸರ್ಕಾರದ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿರುವ ಅಧಿಕಾರ ಪ್ರತ್ಯಾಯೋಜನೆಯನ್ವಯ ಹೊರಡಿಸಿದೆ.

ಭಾರತದ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಮಹಾಲಕ್ಷ್ಮಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

(ಭಾರತೀಯ ವೈದ್ಯ ಪದ್ಧತಿ)

**ಅನುಬಂಧ**

**ಸರ್ಕಾರದ ಆದೇಶ ಸಂಖ್ಯೆ:ಆಕುಕ 77 ಪಿಐಎಂ 2008,**

**ದಿನಾಂಕ:01-02-2008 ಕ್ಕೆ ಅನುಬಂಧ**

ಜಿಲ್ಲಾ ಆಸ್ಪತ್ರೆಗಳಲ್ಲಿ ಆಯುಷ್ ವಿಭಾಗಗಳನ್ನು ತೆರೆಯಲು ಕೇಂದ್ರ ಸರ್ಕಾರದ ಮಾರ್ಗಸೂಚಿಗಳು:-

1. **Setting up of AYUSH wings in District Allopathy Hospitals :** outdoor as well as indoor facility of one or two systems of AYUSH is required to be set up under this component of the scheme:-

**District Hospital, Kolar**

| | |
|---|---|
| **Renovation** | 08.00 |
| **Equipments** | 15.00 |
| **Medicine & Diet etc.** | 07.00 |
| **Training** | 01.00 |
| **Lump sum** | 02.00 |
| | 33.00 |

**District Hospitals, Chitradurga & Chikkamagalur**

| | |
|---|---|
| **Renovation** | 03.00 |
| **Equipments** | 15.00 |
| **Medicine & Diet etc.** | 07.00 |
| **Training** | 01.00 |
| **Lump sum** | 02.00 |
| | 28.00 |

**District Hospital, Hassan**

| | |
|---|---|
| **Renovation** | -- |
| **Equipments** | 15.00 |
| **Medicine & Diet etc.** | 07.00 |
| **Training** | 01.00 |
| **Lump sum** | 02.00 |
| | 25.00 |

2. **<u>Space requirements for Panchakarma and Kshara Sutra units</u>:**

| Panchakarma Therapy Center | | Kshara Sutra Therapy Center | |
|---|---|---|---|
| i)6 therapy rooms (each of 200 Sq. ft. area x 6) | 1200 Sq. ft. | i)OPD room | 400 Sq. ft. |
| ii)1 OPD room | 200 Sq. ft. | ii)Operation theatre | 200 Sq. ft. |
| iii)10 beds in pre-existing wards for accommodating 5 male and 5 female patients 300 Sq. ft. x 2 | 600 Sq. ft. | iii)Sterilization room (existing one can be used) | 200 Sq. ft. |
| iv)Kitchen (existing Kitchen can be utilized, if space not available) | 200 Sq. ft. | iv)Recovery room | 200 Sq. ft. |
| v)Office cum record room | 200 Sq. ft. | v)Multi Purpose room | 200 Sq. ft. |
| | | vi)10 beds in pre-existing wards or space for accommodating 5 male and 5 female patients 300 Sq. ft. x 2 | 600 Sq. ft. |
| | | vii)Office cum record room | 200 Sq. ft. |
| **Total** | **2400 Sq. ft.** | **Total** | **2000 Sq. ft.** |

3. **Staff Requirement:- AYUSH wings in District Hospitals:**

2 Specialists, 1 Graduate doctor, 4 Paramedical Staff or Therapists, 1 Pharmacist, 1 Multipurpose worker.

4. **Release of grant funds:**

The Central Government will release funds to the concerned State / UT Govt., and incase of Central Govt. hospitals directly to the Medical Superintendent or equivalent officer of the hospital through the administrative authorities. Medical Superintendent or equivalent officer of the hospital and a duly deputed ISM&H officer of the project will jointly handle the accounts of the grant as joint signatories. A separate bank account for such grant, therefore, must be opened in a scheduled bank under intimation to the Department of ISM&H.

5. The contractual staff wherever engaged will have no claim whatsoever for regularization etc. The concerned State Govts. / Administrative departments / hospitals etc. will own all liabilities and consequences should such a claim is made.

6. The grant would normally be released in two installments for establishment of the proposed unit and then annually for recurring expenditure on medicines. However, the Screening committee would be authorized to decide upon release of total grant for reasons to be recorded.

7. That the entire amount of the grant received will be utilized fully within the financial year in which it is received and the unspent balance, if any will be reported to the Ministry within a period of two months after start of next financial year. In no case the unspent balance shall be utilized without obtaining further sanction to do so from the Ministry. If the grantee fails to utilize the entire amount of grant within the original period or extended period, as the case may be, it shall be refundable with interest to Government of India.

8. The grantee establishment shall be bound to submit six monthly reports indicating progress of the work, attendance of the patients in the ISM&H unit, respectively and acceptability of the facilities of health care rendered from the unit, expenditure statement; and response of the public on the whole with documentary proof.

9. ಔಷಧಗಳಿಗೆ ಸಂಬಂಧಿಸಿದಂತೆ ಹಣವನ್ನು ನಿರ್ದೇಶಕರು, ಆಯುಷ್ ಇಲಾಖೆ, ಬೆಂಗಳೂರು ಇವರು ಡ್ರಾ ಮಾಡಿ Government Central Pharmacy ಹಾಗೂ Undertaking (CPSU) ಗಳಿಂದ ಖರೀದಿಸಿ ಸಂಬಂಧಿಸಿದ ಆಯುಷ್ ವಿಭಾಗಗಳಿಗೆ ಒದಗಿಸಲು ಕ್ರಮ ವಹಿಸುವುದು.

10. ಕೇಂದ್ರ ಸರ್ಕಾರದ ಸಹಾಯ ಧನವನ್ನು ಉಪಯೋಗಿಸಿದ ಕೂಡಲೇ ಬಳಕೆ ಪ್ರಮಾಣ ಪತ್ರವನ್ನು ಕಳುಹಿಸತಕ್ಕದ್ದು.

**N. MAHALAKSHMAMMA**
Under Secretary to Government,
Health & Family Welfare Department

P.R. 279

**ವಿಷಯ:** ಡಾ:ಮಹಮದ್ ಅಫ್ತಾಬ್ ವಾಸೀಂ, ವೈದ್ಯರು ದರ್ಜೆ-2 (ಹೋ), ಸರ್ಕಾರಿ ಹೋಮಿಯೋಪತಿ ಚಿಕಿತ್ಸಾಲಯ, ಶಾಸಕರ ಭವನ, ಬೆಂಗಳೂರು ಇವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿ ನೇಮಕ ಮಾಡುವ ಬಗ್ಗೆ.

**ಓದಲಾಗಿದೆ:**
1. ಕಾರಣ ಕೇಳುವ ನೋಟಿಸ್ ಸಂಖ್ಯೆ:ಆಕುಕ 442 ಪಿಐಎಂ 2007, ದಿನಾಂಕ: 24/26.10.2007.
2. ಆಪಾದಿತರ ಹೇಳಿಕೆ ದಿನಾಂಕ:20-11-2007.

**ಪ್ರಸ್ತಾವನೆ:**

ಡಾ:ಮಹಮದ್ ಅಫ್ತಾಬ್ ವಾಸೀಂ, ವೈದ್ಯರು ದರ್ಜೆ-2 (ಹೋ), ಸರ್ಕಾರಿ ಹೋಮಿಯೋಪತಿ ಚಿಕಿತ್ಸಾಲಯ, ಶಾಸಕರ ಭವನ, ಬೆಂಗಳೂರು ಇವರ ವಿರುದ್ಧ ಕರ್ನಾಟಕ ಹೋಮಿಯೋಪತಿ ಮಂಡಳಿಯಲ್ಲಿ ನಿಯೋಜನೆಯ ಮೇಲೆ ನೋಂದಣಾಧಿಕಾರಿಯಾಗಿ 11/1998 ರಿಂದ 05/2003 ರವರೆಗೆ ಕೆಲಸ ನಿರ್ವಹಿಸಿದ್ದ ಅವಧಿಯಲ್ಲಿ 1961 ರ ಹೋಮಿಯೋಪತಿ ಆಕ್ಟ್ ಅಂಡ್ ರೂಲ್ಸ್‌ನ ಅನುಚ್ಛೇದ 15 ಮತ್ತು 36 ರ ಅನುಸಾರ ಸೂಕ್ತ ನಿಯಮಗಳನ್ನು ರಚಿಸಿಕೊಳ್ಳದೇ, ಸರ್ಕಾರದಿಂದ ಪೂರ್ವಾನುಮತಿ ಹಾಗೂ ಮಂಜೂರಾತಿ ಪಡೆಯದೇ ಆರ್ಥಿಕವಾಗಿ ಕೆಲವು ಅಧಿಕಾರ ದುರುಪಯೋಗ ಹಾಗೂ ಮಂಡಳಿಗೆ ನಷ್ಟ ಉಂಟು ಮಾಡಿ ಕರ್ತವ್ಯ ಲೋಪವೆಸಗಿ ಕರ್ನಾಟಕ ನಾಗರಿಕ ಸೇವಾ (ನಡತೆ) ನಿಯಮಾವಳಿ, 1966 ರ ನಿಯಮ 3(1)(11) ನ್ನು ಉಲ್ಲಂಘಿಸಿರುವ ಬಗ್ಗೆ ಮೇಲೆ ಕ್ರ.ಸಂ. (1) ರಲ್ಲಿ ಓದಲಾದ ಸರ್ಕಾರದ ಪತ್ರದಲ್ಲಿ ಕಾರಣ ಕೇಳುವ ನೋಟಿಸ್‌ನ್ನು ದೋಷಾರೋಪಣಾ ಪಟ್ಟಿಯೊಂದಿಗೆ (ಅನುಬಂಧ-1 ರಿಂದ 4 ರಲ್ಲಿ) ಜಾರಿ ಮಾಡಿ ಲಿಖಿತ ಹೇಳಿಕೆಯನ್ನು ಸಲ್ಲಿಸುವಂತೆ ಸೂಚಿಸಲಾಗಿತ್ತು.

ಮೇಲೆ ಕ್ರ.ಸಂ. (2) ರಲ್ಲಿ ಓದಲಾದ ಪತ್ರದಲ್ಲಿ, ಲಿಖಿತ ಹೇಳಿಕೆಯನ್ನು ಸಲ್ಲಿಸಿ ಆಪಾದನೆಗಳನ್ನು ತಿರಸ್ಕರಿಸಿರುತ್ತಾರೆ. ಆದ್ದರಿಂದ, ಸರ್ಕಾರವು ಡಾ:ಮಹಮದ್ ಅಫ್ತಾಬ್ ವಾಸೀಂ, ವೈದ್ಯರು ದರ್ಜೆ-2 (ಹೋ), ಸರ್ಕಾರಿ ಹೋಮಿಯೋಪತಿ ಚಿಕಿತ್ಸಾಲಯ, ಶಾಸಕರ ಭವನ, ಬೆಂಗಳೂರು ಇವರ ವಿರುದ್ಧ ಇಲಾಖಾ ವಿಚಾರಣೆಯನ್ನು ನಡೆಸಲು ತೀರ್ಮಾನಿಸಿದ್ದು, ನಿವೃತ್ತ ನ್ಯಾಯಾಧೀಶರಾದ ಶ್ರೀ ಸತ್ಯಮೂರ್ತಿ ಹೊಳ್ಳ ಇವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಆಯುಷ್ ಇಲಾಖೆಯ ಮುಖ್ಯ ಆಡಳಿತಾಧಿಕಾರಿಯವರನ್ನು ಮಂಡನಾಧಿಕಾರಿಯನ್ನಾಗಿ ನೇಮಕ ಮಾಡಲು ತೀರ್ಮಾನಿಸಿದೆ. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ:ಆಕುಕ 442 ಪಿಐಎಂ 2007, ಬೆಂಗಳೂರು, ದಿನಾಂಕ:30ನೇ ಜನವರಿ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಸರ್ಕಾರವು ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957 ರ ನಿಯಮ 11(2) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಸತ್ಯಮೂರ್ತಿ ಹೊಳ್ಳ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಸಂಖ್ಯೆ:2264, ಹೆಚ್.ಎ.ಎಲ್., 3 ನೇ ಹಂತ, ಬಿ.ಡಿ.ಎ. ಲೇಔಟ್, 2 ನೇ ಕ್ರಾಸ್ ರಸ್ತೆ, 4 ನೇ ಮುಖ್ಯ ರಸ್ತೆ, ವಿಮಾನಪುರ ಪೋಸ್ಟ್, ಬೆಂಗಳೂರು-17 ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿ, ಡಾ:ಮಹಮದ್ ಅಫ್ತಾಬ್ ವಾಸೀಂ, ವೈದ್ಯರು ದರ್ಜೆ-2 (ಹೋ), ಸರ್ಕಾರಿ ಹೋಮಿಯೋಪತಿ ಚಿಕಿತ್ಸಾಲಯ, ಶಾಸಕರ ಭವನ, ಬೆಂಗಳೂರು ಇವರ ವಿರುದ್ಧ ಮಾಡಲಾಗಿರುವ ದೋಷಾರೋಪಣೆಗಳ ಬಗ್ಗೆ ಸದರಿ ನಿಯಮ 11 ರಡಿಯಲ್ಲಿ ಇಲಾಖಾ ವಿಚಾರಣೆಯನ್ನು ಮೂರು ತಿಂಗಳೊಳಗೆ ಮುಗಿಸಿ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸುವಂತೆ ಆದೇಶಿಸಿದೆ. ಈ ವಿಚಾರಣೆಗಾಗಿ ಅವರು ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 16 ಸೇಇವಿ 2005, ದಿನಾಂಕ: 23-08-2005 ರನ್ವಯ ರೂ. 6000/- (ಆರು ಸಾವಿರ ರೂಪಾಯಿಗಳು ಮಾತ್ರ) ಗೌರವಧನ ಹಾಗೂ ಸರ್ಕಾರಿ

ಆದೇಶ ಸಂಖ್ಯೆ:ಸಿಆಸುಇ 45 ಸೇಇವಿ 2001, ದಿನಾಂಕ:04-03-2002 ರಂತೆ ರೂ. 1000/- (ಒಂದು ಸಾವಿರ ರೂಪಾಯಿಗಳು ಮಾತ್ರ) ವಾಹನ ಭತ್ಯೆಯನ್ನು ಪಡೆಯುತ್ತಾರೆ.

ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು, 1957 ರ ನಿಯಮ 11 ರ ಉಪ ನಿಯಮ (5)(ಸಿ) ಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶಿಸ್ತು ಪ್ರಾಧಿಕಾರಿಯ ಪರವಾಗಿ ವಿಷಯವನ್ನು ಮಂಡಿಸಲು ಮುಖ್ಯ ಆಡಳಿತಾಧಿಕಾರಿಗಳು, ಆಯುಷ್ ನಿರ್ದೇಶನಾಲಯ, ಬೆಂಗಳೂರು ಇವರನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸಿದೆ.

ಭಾರತದ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಮಹಾಲಕ್ಷ್ಮಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 280 ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

(ಭಾರತೀಯ ವೈದ್ಯ ಪದ್ಧತಿ)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಹೆಚ್. ಗಂಗಯ್ಯ, ಹಿಂದಿನ ನಿರ್ದೇಶಕರು, ಸರ್ಕಾರಿ ಮುದ್ರಣ ಮತ್ತು ಲೇಖನ ಸಾಮಗ್ರಿಗಳ ಇಲಾಖೆ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಸನ್ಮಾನ್ಯ ಲೋಕಾಯುಕ್ತರವರಿಗೆ ವಹಿಸುವ ಬಗ್ಗೆ.

**ಓದಲಾಗಿದೆ:** ಹೆಚ್ಚುವರಿ ನಿಬಂಧಕರು ವಿಚಾರಣೆಗಳು–5, ಕರ್ನಾಟಕ ಲೋಕಾಯುಕ್ತ ಬೆಂಗಳೂರು ಅವರ ಪತ್ರ ಸಂಖ್ಯೆ:ಕಂಪ್ಲೆಂಟ್/ಲೋಕ್/ ಬಿಸಿಡಿ–58/98–99/ಎಆರ್ಇ–5 ದಿನಾಂಕ:28.11.2006.

**ಪ್ರಸ್ತಾವನೆ :**

ಹೆಚ್ಚುವರಿ ನಿಬಂಧಕರು ವಿಚಾರಣೆಗಳು–5, ಕರ್ನಾಟಕ ಲೋಕಾಯುಕ್ತ ಬೆಂಗಳೂರು ಅವರು ಮೇಲೆ ಓದಲಾದ ದಿ:28.11.06ರ ತಮ್ಮ ಪತ್ರದಲ್ಲಿ ಸನ್ಮಾನ್ಯ ಲೋಕಾಯುಕ್ತರವರು ದಿ:3.11.06ರಂದು ಸರ್ಕಾರಕ್ಕೆ ಮಾಡಿದ ಶಿಫಾರಸ್ಸಿನ ಪ್ರತಿಯನ್ನು ಕಳುಹಿಸಿದ್ದಾರೆ. ಶ್ರೀ ಹೆಚ್. ಗಂಗಯ್ಯ ಅವರು ಸರ್ಕಾರಿ ಮುದ್ರಣ ಮತ್ತು ಲೇಖನ ಸಾಮಗ್ರಿಗಳ ಇಲಾಖೆಯಲ್ಲಿ ನಿರ್ದೇಶಕರಾಗಿ ಕಾರ್ಯನಿರ್ವಹಿಸುತ್ತಿದ್ದಾಗ, ಪಂಚಾಯತ್ ರಾಜ್ ಕಾಯ್ದೆ (ಕನ್ನಡ), ಭೂಸುಧಾರಣಾ ಕಾಯ್ದೆ (ಇಂಗ್ಲಿಷ್) ಮತ್ತು ಮುನ್ಸಿಪಾಲಿಟಿ ಕಾಯ್ದೆ (ಇಂಗ್ಲೀಷ್)ಗಳನ್ನು ಹಾಗೂ 2ನೇ ಪಿ.ಯು.ಸಿ. ಪುಸ್ತಕಗಳನ್ನು ಸರ್ಕಾರಿ ಮುದ್ರಣಾಲಯದಲ್ಲಿ ಮುದ್ರಿಸದೇ ಮತ್ತು ಮುದ್ರಿಸಲು ಯಾವುದೇ ಕೊಟೇಷನ್‌ಗಳನ್ನು ಕರೆಯದೇ ಖಾಸಗಿ ಮುದ್ರಣಾಲಯಗಳಿಗೆ ವಹಿಸಿ ಸರ್ಕಾರಕ್ಕೆ ಕ್ರಮವಾಗಿ ರೂ.33,852/– ಮತ್ತು ರೂ. 11.00 ಲಕ್ಷ ಹಣ ಹೆಚ್ಚುವರಿ ವೆಚ್ಚ ಮಾಡುವುದರ ಮೂಲಕ ತಮ್ಮ ಅಧಿಕಾರ ದುರುಪಯೋಗಪಡಿಸಿಕೊಂಡಿದ್ದಾರೆಂದು ಶ್ರೀ ರುದ್ರಮುನಿಶೆಟ್ಟಿ, ಬೆಂಗಳೂರು ಅವರು ಸಲ್ಲಿಸಿದ ದೂರಿನ ಮೇರೆಗೆ ತನಿಖೆಯನ್ನು ನಡೆಸಿದ ಸನ್ಮಾನ್ಯ ಲೋಕಾಯುಕ್ತರವರು ಮೇಲೆ ಓದಲಾದ ತಮ್ಮ ಪತ್ರದಲ್ಲಿ ಉಲ್ಲೇಖಿಸಿದ ಲೋಕಾಯುಕ್ತ ಕಾಯ್ದೆ ಕಲಂ 12(3)ರಡಿಯ ತಮ್ಮ ವರದಿಯಲ್ಲಿ ಸದರಿ ಅಧಿಕಾರಿಯವರ ವಿರುದ್ಧ ಮಾಡಿರುವ ಆರೋಪವು ಮೇಲ್ನೋಟಕ್ಕೆ ಸತ್ಯವೆಂದು ಕಂಡು ಬರುತ್ತದೆಯೆಂದು ತಿಳಿಸಿ ಅವರ ವಿರುದ್ಧ ಪೂರ್ಣ ಪ್ರಮಾಣದ ತನಿಖೆಗಾಗಿ ಸಿ.ಸಿ.ಎ. ನಿಯಮ 14–ಎ ರಡಿ ತಮಗೆ ವಹಿಸುವಂತೆ ಶಿಫಾರಸ್ಸು ಮಾಡಿದ್ದಾರೆ. ಸನ್ಮಾನ್ಯ ಲೋಕಾಯುಕ್ತರ ಶಿಫಾರಸ್ಸನ್ನು ಪರಿಶೀಲಿಸಿದ ಸರ್ಕಾರವು ಅದನ್ನು ಒಪ್ಪಿಕೊಂಡು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 450 ಎಸ್ಇಎನ್ 2006, ಬೆಂಗಳೂರು, ದಿನಾಂಕ: 30ನೇ ಏಪ್ರಿಲ್ 2007**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 14–ಎ ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಹೆಚ್. ಗಂಗಯ್ಯ, ಹಿಂದಿನ ನಿರ್ದೇಶಕರು, ಸರ್ಕಾರಿ ಮುದ್ರಣ ಮತ್ತು ಲೇಖನ ಸಾಮಗ್ರಿಗಳ ಇಲಾಖೆ, ಬೆಂಗಳೂರು ಅವರ ವಿರುದ್ಧ ಮೇಲೆ ಹೇಳಲಾದ ಆರೋಪಗಳ ಕುರಿತು ಪೂರ್ಣ ಪ್ರಮಾಣದ ಇಲಾಖಾ ವಿಚಾರಣೆಯನ್ನು ನಡೆಸಲು ಸನ್ಮಾನ್ಯ ಲೋಕಾಯುಕ್ತರಿಗೆ ವಹಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವಾಸುದೇವಮೂರ್ತಿ**

ಪಿ.ಆರ್. 753 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–3)

**ವಿಷಯ:** ಶ್ರೀ ಹೆಚ್.ಗಂಗಯ್ಯ, ವಿಶೇಷಾಧಿಕಾರಿ, ಶಿಕ್ಷಣ ಇಲಾಖೆ, ಹಿಂದಿನ ನಿರ್ದೇಶಕರು, ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆ, ಬೆಂಗಳೂರು ಇವರ ಮೇಲಿನ ಆರೋಪಗಳಿಗೆ ವಿಚಾರಣೆ ನಡೆಸಲು ಕೆ.ಸಿ.ಎಸ್. (ಸಿಸಿಎ) ನಿಯಮಾವಳಿಗಳು 1957ರ ನಿಯಮ 14–ಎ ಅಡಿಯಲ್ಲಿ ಮಾನ್ಯ ಲೋಕಾಯುಕ್ತರಿಗೆ ವಹಿಸುವ ಬಗ್ಗೆ–ಆದೇಶ.

**ಓದಲಾಗಿದೆ:** ಅಪರ ನಿಬಂಧಕರು, ವಿಚಾರಣೆಗಳು–5, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: ಕಂಪ್ಲೆಂಟ್/ಲೋಕ್/ಬಿಸಿಡಿ–149/99–2000/ಎಆರ್‌ಇ–5 ದಿನಾಂಕ:28.11.2006.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ:28.11.2006ರ ಪತ್ರದಲ್ಲಿ ಕರ್ನಾಟಕ ಲೋಕಾಯುಕ್ತ ಕಛೇರಿಯ ಅಪರ ನಿಬಂಧಕರು, ವಿಚಾರಣೆಗಳು–5 ಇವರು ಮಾನ್ಯ ಲೋಕಾಯುಕ್ತರು, ಕರ್ನಾಟಕ ಲೋಕಾಯುಕ್ತ ಅಧಿನಿಯಮ 12(3)ರಡಿಯಲ್ಲಿ ತಯಾರಿಸಲಾದ ತನಿಖಾ ವರದಿ ಸಂಖ್ಯೆ:ಕಂಪ್ಲೆಂಟ್/ಲೋಕ್/ಬಿಸಿಡಿ–149/99–2000 ದಿನಾಂಕ:23.11.2006ನ್ನು ಸರ್ಕಾರಕ್ಕೆ ಒದಗಿಸಿ, ಮಾನ್ಯ ಲೋಕಾಯುಕ್ತರು ಮಾಡಿರುವ ಶಿಫಾರಸ್ಸಿನಂತೆ ಕ್ರಮ ಕೈಗೊಂಡು, ಸರ್ಕಾರದ ನಿರ್ಣಯವನ್ನು 3 ತಿಂಗಳೊಳಗಾಗಿ ತಿಳಿಸುವಂತೆ ಕೋರಿದ್ದರು.

ಮಾನ್ಯ ಲೋಕಾಯುಕ್ತರು ತಮ್ಮ ತನಿಖಾ ವರದಿಯಲ್ಲಿ, ಬೆಂಗಳೂರಿನ ಶ್ರೀ ಆರ್. ರಾಮಸ್ವಾಮಿ ಎಂಬುವವರು ಕರ್ನಾಟಕ ಲೋಕಾಯುಕ್ತಕ್ಕೆ ನೀಡಿದ ದೂರಿನಲ್ಲಿ ಶ್ರೀ ಹೆಚ್.ಗಂಗಯ್ಯ, ವಿಶೇಷಾಧಿಕಾರಿ, ಶಿಕ್ಷಣ ಇಲಾಖೆ ಇವರು ಈ ಹಿಂದೆ ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖಾ ನಿರ್ದೇಶಕರಾಗಿ ಕಾರ್ಯನಿರ್ವಹಿಸುತ್ತಿದ್ದಾಗ, ಸರ್ಕಾರದ ಹಣ ದುರುಪಯೋಗ, ನಿಯಮ ಉಲ್ಲಂಘನೆ ಮತ್ತು ದುರಾಡಳಿತ ಎಸಗಿದ್ದಾರೆಂದು ತಿಳಿಸಿದ್ದು, ಈ ದೂರನ್ನು ದಾಖಲಿಸಿಕೊಂಡು ತನಿಖೆ ನಡೆಸಿದಾಗ, ಸರ್ಕಾರಿ ಮುದ್ರಣಾಲಯದಲ್ಲಿ ಮುದ್ರಿಸುವಂತಹ ಮುದ್ರಣ ಕಾರ್ಯಗಳನ್ನು ಖಾಸಗಿ ಮುದ್ರಕರಿಗೆ ವಹಿಸಿ ಸರ್ಕಾರಕ್ಕೆ ಹೆಚ್ಚಿನ ಆರ್ಥಿಕ ಹೊರೆಯಾಗಲು ಕಾರಣರಾಗಿರುವುದು, ಈ ವಿಷಯದಲ್ಲಿ ಯಾವುದೇ ಅಧಿಕಾರಿಗಳ ಸಮಿತಿಯನ್ನು ರಚಿಸದೆ ಖಾಸಗಿ ಮುದ್ರಕರಿಗೆ ವಹಿಸುವ ಬಗ್ಗೆ ಅಗತ್ಯತೆಯ ಬಗ್ಗೆ ಸಲಹೆ ಪಡೆಯದೇ ಇರುವುದು ಹಾಗೂ ಏಕಪಕ್ಷೀಯವಾಗಿ ನಿರ್ದೇಶಕರೇ ನಿರ್ಣಯ ಕೈಗೊಂಡಿರುವುದು ಹಾಗೂ ಮುದ್ರಣಾಲಯದ ಸಿಬ್ಬಂದಿಗಳ ಕೆಲಸ ಕಾರ್ಯಗಳ ಮೌಲ್ಯಮಾಪನ ಮಾಡದೇ ಇರುವುದು, ಸಿಬ್ಬಂದಿ ಕಾರ್ಯದ ಬಗ್ಗೆ ಯಾವುದೇ ಸಮರ್ಪಕವಾದ ದಾಖಲೆಗಳನ್ನು ನಿರ್ವಹಿಸದೇ ಮುದ್ರಣ ಕಾರ್ಯವು ಕುಂಠಿತಗೊಂಡು ಮುದ್ರಣದ ಹೆಚ್ಚಿನ ಕಾರ್ಯವನ್ನು ಖಾಸಗಿ ಮುದ್ರಕರಿಗೆ ವಹಿಸಲು ಕಾರಣರಾಗಿ ಅಧಿಕಾರ ದುರುಪಯೋಗಪಡಿಸಲು ಹಾಗೂ ದುರಾಡಳಿತ ನಡೆಸಲು ಕಾರಣರಾಗಿರುವುದು ತನಿಖೆಯಿಂದ ಕಂಡು ಬಂದಿದ್ದರಿಂದ ಸದರಿಯವರ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳಲು ಯೋಗ್ಯವಾದ ಪ್ರಕರಣವೆಂದು ನಿರ್ಣಯಿಸಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳನ್ವಯ ಲೋಕಾಯುಕ್ತಕ್ಕೆ ವಹಿಸುವಂತೆ ಶಿಫಾರಸ್ಸು ಮಾಡಿದ್ದರು.

ಮಾನ್ಯ ಲೋಕಾಯುಕ್ತರು ನಿಯಮ 12(3)ರಡಿಯಲ್ಲಿ ಸಲ್ಲಿಸಲಾದ ವರದಿಯಲ್ಲಿನ ಅಂಶಗಳನ್ನು ಸರ್ಕಾರವು ಪರಿಶೀಲಿಸಿ, ಶ್ರೀ ಹೆಚ್.ಗಂಗಯ್ಯ, ಹಿಂದಿನ ನಿರ್ದೇಶಕರು, ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆ, ಬೆಂಗಳೂರು ಇವರ ಮೇಲಿನ ಆರೋಪಗಳ ಸಂಬಂಧ ಸತ್ಯಸತ್ಯತೆಯನ್ನು ಪೂರ್ಣ ಪ್ರಮಾಣದ ವಿಚಾರಣೆಯಿಂದ ತಿಳಿಯುವ ಅನಿವಾರ್ಯತೆಯನ್ನು ಮನಗಂಡು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 452 ಎಸ್‌ಇಎನ್ 2006, ಬೆಂಗಳೂರು, ದಿನಾಂಕ: 4ನೇ ಜುಲೈ 2007**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು, 1957ರ ನಿಯಮ 14–ಎ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಶ್ರೀ ಹೆಚ್.ಗಂಗಯ್ಯ, ವಿಶೇಷಾಧಿಕಾರಿ, ಶಿಕ್ಷಣ ಇಲಾಖೆ, ಹಿಂದಿನ ನಿರ್ದೇಶಕರು, ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆ, ಬೆಂಗಳೂರು ಇವರ ಮೇಲಿನ ಆರೋಪಗಳ ಸಂಬಂಧ ಪೂರ್ಣ ಪ್ರಮಾಣದ ವಿಚಾರಣೆ ನಡೆಸಲು ಮಾನ್ಯ ಲೋಕಾಯುಕ್ತರಿಗೆ ವಹಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವಾಸುದೇವಮೂರ್ತಿ**

ಪಿ.ಆರ್. 1294

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–3)